

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೨ ಜುಲೈ ೨೦೦೬ ಸಂಚಿಕೆ ೭




ಜೂನ್ ೨೩ರಂದು ಬೆಂಗಳೂರಿನಲ್ಲಿ ಬಸವ ಸಮಿತಿ, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಸಂಯುಕ್ತ ಆಶ್ರಯದಲ್ಲಿ ಏರ್ಪಡಿಸಿದ್ದ ಭವ್ಯ ಸಮಾರಂಭದಲ್ಲಿ ಪ್ರಧಾನಿ ಡಾ|| ಮನಮೋಹನ್ ಸಿಂಗ್ ಅವರು ಬಸವನಾಣ್ಯಗಳನ್ನು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಕೇಂದ್ರ ಹಣಕಾಸು ಸಚಿವ ಶ್ರೀ ಚಿದಂಬರಂ, ರಾಜ್ಯಪಾಲ ಶ್ರೀ ಟಿ.ಎನ್. ಚತುರ್ವೇದಿ, ಮುಖ್ಯಮಂತ್ರಿ ಶ್ರೀ ಹೆಚ್.ಡಿ. ಕುಮಾರಸ್ವಾಮಿ, ಕೇಂದ್ರ ಯೋಜನಾ ರಾಜ್ಯ ಸಚಿವ ಶ್ರೀ ಎಂ.ವಿ. ರಾಜಶೇಖರನ್, ಉಪಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪ ಮತ್ತು ಬಸವ ಸಮಿತಿಯ ಅಧ್ಯಕ್ಷ ಶ್ರೀ ಅರವಿಂದ ಜತ್ತಿ ಅವರು ಉಪಸ್ಥಿತರಿದ್ದರು.



ಪ್ರಧಾನಮಂತ್ರಿ ಡಾ|| ಮನಮೋಹನ್ ಸಿಂಗ್ ಅವರಿಂದ ಬಸವಪುತ್ಥಳಿಗೆ ಗೌರವ ಸಮರ್ಪಣೆ.



ಜುಲೈ ೮ರಂದು ಬೆಂಗಳೂರಿನಲ್ಲಿ ಸಹಾಯ ಸೇವಾ ಸಮಿತಿ, ರಾಜಾಜಿನಗರ ಅವರು ಏರ್ಪಡಿಸಿದ್ದ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು ಔಷಧಿ ಸಸ್ಯಗಳನ್ನು ವಿತರಿಸಿದರು. ಈ ಸಂದರ್ಭದಲ್ಲಿ ಮಾಜಿ ರಾಜ್ಯಪಾಲರಾದ ಶ್ರೀ ಎಂ. ರಾಮಾಜೋಯಿಸ್, ಶ್ರೀ ಡಿ.ವಿ. ಸದಾನಂದ ಗೌಡ, ಶ್ರೀ ಬಸವರಾಜು, ಶ್ರೀ ಅಜಂತ ಎನ್. ರಂಗಸ್ವಾಮಿ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ಸಂಪಾದಕ:
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ:
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ:
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು –572 104.

ವಿಳಾಸ :
"ಸಂಪಾದಕರು",
'ಸಿದ್ಧಗಂಗಾ' ಮಾಸಪತ್ರಿಕೆ'
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –572 104

ಚಂದಾ ವಿವರ :

| | |
|---|---|
| ವಾರ್ಷಿಕ ಚಂದಾ | ರೂ. ೧೦೦/– |
| ಆಜೀವ ಸದಸ್ಯತ್ವ | ರೂ. ೧೦೦೦/– |
| ಬಿಡಿ ಪ್ರತಿ | ರೂ. ೧೦.೦೦ |

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೨ ಜುಲೈ ೨೦೦೬ ಸಂಚಿಕೆ : ೭

## ಒಳಪುಟಗಳಲ್ಲಿ ......................

ಓಂ

## ಶ್ರೀ ಸಿದ್ಧಲಿಂಗೇಶ್ವರ ವಚನ

*ತಲೆಯಲ್ಲಿ ಹುಟ್ಟಿದ ಕಣ್ಣು ನೆಲದೊಡೆಯನ ನುಂಗಿತ್ತು ನೋಡಾ*
*ತಲೆಯಳಿಯಿತ್ತು ನೆಲಬೆಂದಿತ್ತು*
*ತಲೆಯೊಳಗಣ ಕಣ್ಣು*
*ತ್ರಿಜಗಾಧಿಪತಿಯ ತಾನೆಂದು ನೊಡುತ್ತ ನೋಡುತ್ತ ಅರಗಲು*
*ನೆಲದೊಡೆಯ ಸುತ್ತುದ ಕಂಡು*
*ನಿರ್ವಯಲ ಸಮಾಧಿಸ್ಥನಾಗಿ*
*ಕುರುಹಳಿದು ಲಿಂಗೈಕ್ಯನ ಏನೆಂದು ಪಮಿಸುವೆನಯ್ಯಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.*

ಕರ್ಮವಶದಿಂದ ದೇಹಸಂಬಂಧಿಯಾದಾತ್ಮನ ಅಜ್ಞಾನವೆಂಬ ಶಿರಸ್ಸಿನಲ್ಲಿ ಸುಜ್ಞಾನ ನೇತ್ರೋದಯವಾಗಿ ಗುರುಕೃಪೆಯಂ ಪಡೆದು, ಲಿಂಗಾಂಗ ಸಂಬಂಧಿಯಾಗಿ, ಷಟ್‌ಸ್ಥಲ ಜ್ಞಾನ ಕ್ರೀವಿಡಿದಾಚರಿಸಿದಲ್ಲಿ, ಆ ದೇಹ ಸಂಬಂಧಿಯಾದ ಜೀವನ ಜೀವಭಾವವಳಿದು, ಮಂತ್ರಲಿಂಗ ಪ್ರಕಾಶವಾಗೊಪ್ಪುತ್ತಿಹುದು. ಅಂತಪ್ಪ ಜೀವನ ಜೀವಭಾವವಳಿದು ಲಿಂಗದಲ್ಲೇಕಸ್ವರೂಪವನೆಯ್ದುದಲ್ಲಿ ಅಜ್ಞಾನವೆಂಬ ಶಿರಸ್ಸು ಸುಜ್ಞಾನದಿಂದೆ ನಷ್ಟವಾಗಿ, ದೇಹಭಾವದ ವರ್ತನೆಯ ಮಂತ್ರಲಿಂಗಸಂಬಂಧದಿಂದ ನಿವೃತ್ತಿಯನೆಯ್ದಿತ್ತು. ಅಂತಪ್ಪ ಲಿಂಗಾಂಗ ಸಂಬಂಧಿಯಾದ ಶರಣನು, ತನ್ನ ಸುಜ್ಞಾನ ಶಿರಸ್ಸಿನಲ್ಲಿಯ ಜ್ಞಾನ ಚಕ್ಷುವಿನಿಂದೆ ತನುತ್ರಯಂಗಳಿಗೆ ಕರ್ತೃವಾದಿಷ್ಟ ಪ್ರಾಣಭಾವ ಲಿಂಗವ ಸ್ವಯಂಭುವೆಂದರಿದು, ಕ್ರಿಯಾಜ್ಞಾನಭಾವದೃಕ್ಕುಗಳಿಂದ ನಿರೀಕ್ಷಿಸಿ, ಅಗ್ನಿಯೊಡವೆರೆದ ಕರ್ಪೂರದಂತೆ ಲಿಂಗದಲ್ಲೇಕತ್ವ ವೇಯ್ದಿರ್ಪನು. ಅಂತಪ್ಪ ಚಿದಂಗ ಸಂಬಂಧಿಯಾದ ಸಜ್ಜೀವನು ಸದ್ರೂಪ ಬ್ರಹ್ಮವೆ ಆದುದನು ಜ್ಞಾನದೃಕ್ಕಿನಿಂದೆ ನಿರೀಕ್ಷಿಸಿ, ನಿರಾಕಾರವಾದ ಪರಬ್ರಹ್ಮವೆ ವಿಶ್ರಾಂತಿ ಸ್ಥಾನವುಳ್ಳಾತನಾಗಿ, ಅಂಗಲಿಂಗವೆಂಬ ಖಂಡಿತ ಕುರುಹು ನಿರ್ವಯಲನೆಯ್ದಿದಿದ ಶಿವೈಕ್ಯನ ನಿಂದ್ರವತ್ ಘಟವತ್ ಪಟವತ್ ಎಂದು ಪಮಿಸುವುದಕ್ಕ ಸಾಧ್ಯಮಾಗಿರ್ಪನು.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಿ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ– ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ – ಡಂಬಳ– ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ದಿಕ್ಕಾದೆ ದೆಸೆಯಾದೆ ತಾಯಾದೆ ಮಕ್ಕಳಿಗೆ
ಮತಿಯಾದೆ ಮನಸಾದೆ ಬೆಳಕಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆತ್ಮರತಿ ಶತ್ರುವೆ ಆತ್ಮಸ್ಥೈರ್ಯದರವಿಯೆ
ಆತ್ಮಬಲದ ಭೀಮ ಭವ್ಯವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾತುಮೌನವಗೊಳಿಸಿ ಮೌನವ ಮಾತಾಗಿಸಿ
ಮಾತುಮನಂಗಳ ಹೊಲಿದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಡುವ ನದಿಯಾಗಿಸಿದೆ ಜಡವ ಜಂಗಮಗೈದೆ
ಮುಗ್ಗಲು ಮನಗಳಿಗೆ ಸಿಡಿಲಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಚಾರ್ಯ ಸೂರ್ಯನೆ ಸುವಿಚಾರ ಚಂದ್ರಮನೆ
ಸದುಹೃದಯ ಸುಂದರ ಶಿವತೇಜ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಸ್ಮವ್ಯಸನಿ ವಿಭುವೆ ಲಿಂಗವ್ಯಸನಿ ಪ್ರಭುವೆ
ಅಕ್ಷಿರುದ್ರ ಪ್ರಿಯನೆ ಶಾಂತನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದಾಸೋಹ ವ್ಯಸನಿಯೆ ದಾಸೋಹ ಭಾನುವೆ
ದಾಸೋಹ ಸರ್ವ ಶ್ರೀ ಶಿವವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರಿವಿನ ಅರಿವಾದ ಆದರ್ಶದ ಸಿರಿಯಾದೆ
ಅನುಭಾವ ಲೋಕದ ಸೊಡರಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಚಿಗುರುವ ಹಸಿರಾದೆ ಅರಳುವ ಹೂವಾದೆ
ಹರಿಯುವ ನದಿಯಾಗಿ ಬೆಳಕಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೋರಾಟ ನಡೆಸಿದೆ ಒಳಗೂ ಹೊರಗೂ ಹೊಸತನ
ಹೋರಾಟಕೆದುರಾಗಿ ಚರಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ಅಪರೂಪದ ಔಷಧಿ

*ಇದೊಂದು ಅಪೂರ್ವ ಪ್ರಸಂಗ. ಸುಮಾರು ಎಪ್ಪತ್ತು ವರ್ಷಗಳಷ್ಟು ಹಿಂದೆ ಎಮ್ಮಿಗಪ್ಪ ಎಂಬ ಹಳ್ಳಿಗನೊಬ್ಬನಿದ್ದ. ಅಕ್ಷರ ಜ್ಞಾನವಿದ್ದವನಲ್ಲ. ಆದರೆ ತುಂಬಾ ತಿಳಿವಳಿಕೆಯಿದ್ದಾತ. ಒಂದು ದಿನ ಸುಮ್ಮನೆ ಕುಳಿತವನಲ್ಲ. ಸದಾ ಯಾವುದಾದರೊಂದು ಕೆಲಸ ಮಾಡುತ್ತಲೇ ಇರುತ್ತಿದ್ದ. ಯಾವಾಗಲೂ ಹೀಗೆ ದುಡಿಯುತ್ತಲೇ ಇರುತ್ತೀಯಲ್ಲಾ, ನಿನಗೆ ಬೇಸರವಾಗುವುದಿಲ್ಲವೆ ಎಂದು ಯಾರಾದರೂ ಅವನನ್ನು ಕೇಳಿದರೆ ಯಾಕೆ ಬೇಸರ, ಬೀಸುವ ಗಾಳಿ, ಹರಿವನೀರು, ಉರಿವ ಸೂರ್ಯ ಎಂದಾದರೂ ಬೇಸರ ಮಾಡಿಕೊಂಡಿದ್ದಾವೆಯೇ? ಅಂದಾಗ ಗಾಳಿ, ನೀರು, ಬೆಳಕನ್ನು ಅನುಭವಿಸುತ್ತಿರುವ ನಮಗೇಕೆ ಬೇಸರವಾಗಬೇಕು? ಎಂದು ಮರು ಪ್ರಶ್ನೆ ಹಾಕಿಬಿಡುತ್ತಿದ್ದ. ಸಾಮಾನ್ಯವಾಗಿ, ಯಾರಿಗಾದರೂ ದೇಹಾರೋಗ್ಯ ಕೆಟ್ಟರೆ ಹಲವು ಹನ್ನೊಂದು ರೂಪದಲ್ಲಿ ಚಿಕಿತ್ಸೆ ಮಾಡಿಕೊಳ್ಳುವುದು ಸಾಮಾನ್ಯ ಸಂಗತಿ. ಕೆಲವರು ವೈದ್ಯರ ಸಲಹೆಯ ಮೇರೆಗೆ ಔಷಧಿ ಸೇವನೆ ಮಾಡುತ್ತಾರೆ. ಕೆಲವರು ಊಟ ಬಿಡುತ್ತಾರೆ, ಕೆಲವರು ಸುಮ್ಮನೆ ವಿಶ್ರಾಂತಿ ತೆಗೆದುಕೊಳ್ಳುತ್ತಾರೆ. ಮತ್ತೆ ಕೆಲವರು ತಮ್ಮ ಆಪ್ತೇಷ್ಟರಲ್ಲಿ ತಮ್ಮ ನೋವನ್ನು ತೋಡಿಕೊಳ್ಳುತ್ತಾ ನರಳುತ್ತಾರೆ. ಕೆಲವರು ಗೊಣ ಗಾಣುತ್ತ ಸಿಡಿಮಿಡಿಗೊಳ್ಳುತ್ತಾರೆ. ಕೆಲವರು ಮದ್ಯಪಾನಾದಿಗಳನ್ನು ತಪ್ಪದೇ ಪಾಲಿಸುತ್ತಾರೆ. ಇನ್ನೂ ಕೆಲವರು ತಮ್ಮ ಬಳಿಗೆ ಬಂದವರನ್ನು 'ತಮ್ಮ ಕೈಮುಟ್ಟಿ ನೋಡಿ. ಹಣೆ ಮೇಲೆ ಕೈಯಿಟ್ಟು ನೋಡಿ ಮೈಸುಡುತ್ತಿದೆಯಲ್ಲವೇ? ಈ ಜ್ವರ ಬೆಂಕಿಯಂತೆ ಸುಡುತ್ತಿದೆ ಸತ್ತರೆ ಸಾಕಪ್ಪಾ ಎನಿಸಿಬಿಟ್ಟಿದೆ' ಎಂದೆಲ್ಲಾ ಬಡಬಡಿಸುತ್ತಾರೆ. ಆದರೆ ಎಮ್ಮಿಗಪ್ಪನ ಔಷದೋಪಚಾರ ಅತ್ಯಂತ ವಿಶಿಷ್ಟವಾದುದು. ಅವನಿಗೆ ಜ್ವರ ಬಂದರೆ ಯಾವ ಮದ್ದುಮಸಿಯನ್ನೂ, ನಾರುಬೇರನ್ನೂ, ಕಷಾಯಾದಿಗಳನ್ನು ಕುಡಿಯುತ್ತಿರಲಿಲ್ಲ. ಮನೆಯಲ್ಲಿದ್ದ ಗುದ್ದಲಿಯನ್ನು ತೆಗೆದುಕೊಂಡು ಹೊಲಕ್ಕೆ ನಡೆದು ಬಿಡುತ್ತಿದ್ದ. ಹೊಲದಲ್ಲಿ ಮೈಬೆವರು ಬರುವವರೆಗೆ ನೆಲ ಅಗಿಯುತ್ತಿದ್ದ. ಬೆವರೆಲ್ಲ ಬಿಸಿದುಮ್ಮ ಆರಿದ ನಂತರವೇ ಅಗಿಯುವುದನ್ನು ನಿಲ್ಲಿಸುತ್ತಿದ್ದುದು. ಶ್ರಮದ ಮುಂದೆ ಜ್ವರ ಕಾಲು ಕೀಳುತ್ತಿತ್ತು. ಸಂಜೆಗೆ ಮನೆಗೆ ಬರುವಾಗ ಮಾಮೂಲಿ ಎಮ್ಮಿಗಪ್ಪನಾಗಿರುತ್ತಿದ್ದ. ಶ್ರಮಿಕ ಸಂಸ್ಕೃತಿಯ ಆರಾಧಕನಾಗಿದ್ದ ಎಮ್ಮಿಗಪ್ಪನಂಥವರು ಇಂದೆಲ್ಲಿ ಕಾಣಬೇಕು.*

*(೦೨-೦೭-೨೦೦೬ ರಂದು ದೊಡ್ಡಹೆಜ್ಜಾಜಿಯಲ್ಲಿ ಲಿಂಗೈಕ್ಯ ಹೆಚ್.ಬಿ. ನಂಜಪ್ಪನವರ ಸ್ಮರಣಾರ್ಥ ಸಮಾರಂಭದಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ)*

*

## ಬಸವನಾಣ್ಯ ಬಿಡುಗಡೆ

ಆತ್ಮೀಯರೇ,

ಜೂನ್ ೩೦ ರಂದು ಬಸವನಾಣ್ಯದ ಬಿಡುಗಡೆಯಾಯಿತು. ಭಾರತದ ಪ್ರಧಾನಿಗಳಾದ ಡಾ। ಮನಮೋಹನ ಸಿಂಗ್ ಅವರು ನಾಣ್ಯವನ್ನು ಬಿಡುಗಡೆ ಮಾಡುತ್ತಾ 'ಮಹಾತ್ಮ ಬಸವೇಶ್ವರರ ತತ್ವಗಳು ಸಮಸ್ತ ಜಗತ್ತಿಗೇ ಬೇಕಾದಂಥವು. ಅವುಗಳ ಆಚರಣೆಯಿಂದ ಲೋಕಕಲ್ಯಾಣ ಸಾಧ್ಯ' ಎಂಬುದಾಗಿ ನುಡಿದರು. ಕೇಂದ್ರ ಸರ್ಕಾರದ ಅರ್ಥಮಂತ್ರಿಗಳಾದ ಶ್ರೀ ಚಿದಂಬರಂ ಅವರು ಸಮಾರಂಭದ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ರೂ. ಐದರ, ನೂರರ ನಾಣ್ಯಗಳ ಬಿಡುಗಡೆಯಾಯಿತು.

ಬಸವಣ್ಣನವರ ಇತಿಹಾಸದಲ್ಲಿ ಇದೊಂದು ಮಹತ್ವದ ಮೈಲಿಗಲ್ಲು. ಕಾಯಕ, ದಾಸೋಹ, ಸಮಾನತೆಯನ್ನು ಸಾರಿದ ಮಹಾಮಾನವ ಶ್ರೇಷ್ಠನಿಗೆ ಸಂದ ಲೋಕ ಗೌರವವಿದಾಗಿದೆ. ಕವಿ ಸರ್ವಜ್ಞ ನುಡಿದ ಕಾಲಜ್ಞಾನದ ಮಾತು ಸತ್ಯವಾಗಿದೆ. ಬಸವಣ್ಣ ಭೂಮಿಯ ತಪಸ್ಸಿನ ಫಲ. ಮನುಕುಲದ ಮಂದಾರ ಇಹದ ಬದುಕಿಗೆ ದೇವಲೋಕದ ಕಿರೀಟವನ್ನಿಟ್ಟ ಅಪರೂಪದ ಸಾಧಕ. ಮಾನವೀಯ ಮೌಲ್ಯಗಳೆಲ್ಲ ಒಂದೆಡೆಗೆ ಅರಳಿದ ಮಧುರ ಫಲವೇ ಬಸವಣ್ಣ. ಸಂಸಾರವನ್ನು ಶಿವಮುಖಿಯಾಗಿ ನಡೆಸಿದ ಹಾಗೆ ನಡೆಸುವುದನ್ನು ಸಾಮಾನ್ಯನಿಗೂ ಕಲಿಸಿಕೊಟ್ಟ ಮಹಾನ್ ಆಚಾರ್ಯ. ಇಂದ್ರಿಯಗಳನ್ನು ನಿಗ್ರಹ ಮಾಡಬೇಕಾದುದಿಲ್ಲ, ಅವುಗಳನ್ನು ಉದಾತ್ತಗೊಳಿಸುವುದೇ ನಿಜವಾದ ಸಾಧನೆ ಎಂದು ತೋರಿದ ವಿನೂತನ ದ್ರಷ್ಟಾರ.

ಕರ್ತಾರನ ಕಮ್ಮಟವನ್ನಾಗಿ ಮರ್ತ್ಯವನ್ನು ದರ್ಶಿಸಿದ ಬಸವಣ್ಣ ಕೂಡಲಸಂಗಮನಾಥನನ್ನು ನಾಣ್ಯವನ್ನು ಟಂಕಿಸುವ ಕಲಾಶಿಲ್ಪಿಯನ್ನಾಗಿ ಗೌರವಿಸಿದ. ಮರ್ತ್ಯದ ಮನುಜರೆಲ್ಲರನ್ನು 'ನಾಣ್ಯ'ಗಳನ್ನಾಗಿ ಗೌರವಿಸಿದ ಅಭಿಮಾನಿ. ಅಲ್ಲಿ-ಇಲ್ಲಿ ಎಂಬ 'ಉಭಯ; ಭಾವವಳಿದು 'ಶಿವನಾಣ್ಯ'ವಾದ ಬಸವಣ್ಣನ ನಾಣ್ಯ ಬಿಡುಗಡೆಯಿಂದ ಹಲವು ಮಾನವೀಯ ಮೌಲ್ಯಗಳು ಗೌರವಿಸಿದಂತಾಗಿದೆ. ವ್ಯಕ್ತಿಗೆ ಸಂದ ಗೌರವವಲ್ಲವಿದು. ತತ್ವಗಳಿಗೆ ಆದರ್ಶಗಳಿಗೆ ಸಂದ ಮಾನ್ಯತೆಯಿದಾಗಿದೆ. ಲೋಕನಡೆದು ಬಂದ ಹಾದಿಯಲ್ಲಿ ರಾಜ ಮಹಾರಾಜರುಗಳ, ಚಕ್ರವರ್ತಿಗಳ ಮುದ್ರಾಂಕಿತ ನಾಣ್ಯಗಳಿದ್ದು ಇತಿಹಾಸವನ್ನು ನೆನಪಿಸುತ್ತವೆ. ಕರ್ನಾಟಕಕ್ಕೆ ಕನ್ನಡನುಡಿಗೆ, ಸಂದ ಮಹಾಗೌರವವಿದಾಗಿದೆ.

ಈ ಸ್ಮರಣೀಯ ಸೇವೆಯಲ್ಲಿ, ನಿರಂತರವಾಗಿ ಹಿಡಿದಪಟ್ಟು ಬಿಡದೆ ಸಾಧಿಸಿದ ಬೆಂಗಳೂರಿನ ಬಸವ ಸಮಿತಿಯ ಅಧ್ಯಕ್ಷರಾದ ಸನ್ಮಾನ್ಯ ಶರಣ ಶ್ರೀ ಅರವಿಂದ ಜತ್ತಿಯವರನ್ನು ಅಭಿನಂದಿಸಲು ಸಂತೋಷವಾಗುತ್ತದೆ. ಕೇಂದ್ರ ಸರ್ಕಾರದ ಯೋಜನಾ ಸಚಿವರಾದ ಶ್ರೀ ಎಂ.ವಿ. ರಾಜಶೇಖರನ್ ಅವರನ್ನು ಅಭಿನಂದಿಸಲು ಹರ್ಷವೆನಿಸುತ್ತದೆ. ಇಂಥದೊಂದು ಮಹತ್ವಪೂರ್ಣ ಯೋಜನೆಯಲ್ಲಿ ಸಹಕರಿಸಿದ ಎಲ್ಲ ಆತ್ಮೀಯರನ್ನು 'ಸಿದ್ಧಗಂಗಾ' ಸಂತೋಷವಾಗಿ ಅಭಿನಂದಿಸುತ್ತದೆ.

– ಸಂಪಾದಕ





## ಬಸವ ನಾಣ್ಯ ಬಿಡುಗಡೆ

Sri Basaveshwara
ಶ್ರೀ ಬಸವೇಶ್ವರ
ಭಕ್ತಿ - ಕಾಯಕ - ದಾಸೋಹ - ಸಮತಾ

ಕೋಮುಸೌಹಾರ್ದಕ್ಕೆ ಬಸವೇಶ್ವರರ ಹೆಸರಿನಲ್ಲಿ ರಾಷ್ಟ್ರೀಯ ಪ್ರಶಸ್ತಿ ಸ್ಥಾಪಿಸುವ ಇಂಗಿತವನ್ನು ಪ್ರಧಾನಿ ಮನಮೋಹನ್ ಸಿಂಗ್ ವ್ಯಕ್ತಪಡಿಸಿದ್ದಾರೆ. ಪ್ರಶಸ್ತಿ ಸ್ಥಾಪನೆಯ ಕುರಿತಾದ ಸಲಹೆಯನ್ನು ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿ ನೀಡಿದ್ದಾರೆ. ಅದನ್ನು ಪರಿಗಣಿಸುವಂತೆ ಗೃಹ ಸಚಿವ ಶಿವರಾಜ್ ಪಾಟೀಲ್ ಅವರಿಗೆ ಸೂಚಿಸುವುದಾಗಿ ಬೆಂಗಳೂರು ಅರಮನೆ ಮೈದಾನದಲ್ಲಿ ದಿನಾಂಕ ೩೦ ಜೂನ್ ೨೦೦೬ ಶುಕ್ರವಾರದಂದು ಏರ್ಪಡಿಸಿದ್ದ ಬೃಹತ್ ಸಮಾವೇಶದಲ್ಲಿ ಬಸವೇಶ್ವರರ ನಾಣ್ಯ ಬಿಡುಗಡೆ ಮಾಡಿ ಹೇಳಿದರು.

ಅದೇ ರೀತಿ ಬಸವೇಶ್ವರರ ಹೆಸರಿನಲ್ಲಿ ಅಂತಾರಾಷ್ಟ್ರೀಯ ಅಧ್ಯಯನ ಕೇಂದ್ರ ಸ್ಥಾಪಿಸುವ ಬಗ್ಗೆಯೂ ಪರಿಶೀಲಿಸ ಲಾಗುವುದು. ಮಹಾತ್ಮ ಗಾಂಧೀಜಿಯವರಿಗಿಂತಲೂ ಮೊದಲೇ ಬಸವೇಶ್ವರರು ಅಸ್ಪೃಶ್ಯತೆ ವಿರುದ್ಧ ಹೋರಾಡಿ ವರ್ಗ, ವರ್ಣರಹಿತ ಸಮಾಜ ಕಟ್ಟಿದವರು, ಕಾಯಕ ನಿಷ್ಠೆ ಅವರು ನಮಗೆ ತೋರಿಸಿಕೊಟ್ಟ ಮಾರ್ಗ, ಪ್ರಜಾತಂತ್ರ ಹಾಗೂ ಅಭಿವೃದ್ಧಿ ಎರಡೂ ಒಟ್ಟಿಗೆ ಸಾಗಬೇಕಾದರೆ ಶ್ರೀಸಾಮಾನ್ಯನಿಗೆ ಎಲ್ಲ ಅಧಿಕಾರ ದೊರೆಯಬೇಕೆಂಬುದನ್ನು ಬಸವೇಶ್ವರರು ತಮಗೆ ಹೇಳಿಕೊಟ್ಟ ಪಾಠ. ಹಸುವಿನ ಹಾಲು ಕುಡಿಯಬೇಕಾದರೆ ನಾವು ಕೆಳಗೆ ಇಳಿಯಬೇಕು. ಹಸುವಿನ ಮೇಲೆ ಕುಳಿತವರಿಗೆ ಹಾಲು ಸಿಗುವುದಿಲ್ಲ. ಅದೇ ರೀತಿ ಅಭಿವೃದ್ಧಿ ಕಾಣಬೇಕಾದರೆ ಕಟ್ಟ ಕಡೆಯ ಮನುಷ್ಯನಿಗೆ ಎಲ್ಲ ಸವಲತ್ತು ಲಭಿಸಬೇಕು. ಆತನನ್ನು ಸಬಲೀಕರಿಸುವುದರಲ್ಲಿ ಪ್ರಜಾಪ್ರಭುತ್ವದ ಯಶಸ್ಸು ಅಡಗಿದೆ. ಇದನ್ನು ಇಂದಿನ ಜನಪ್ರತಿನಿಧಿಗಳು ಅರಿಯಬೇಕು. ಸಾರ್ವಜನಿಕ ಬದುಕಿನಲ್ಲಿ ಜನಪ್ರತಿನಿಧಿಗಳು ಹೇಗಿರಬೇಕೆಂಬುದನ್ನು ಬಸವೇಶ್ವರರು ತಮ್ಮ ಬದುಕಿನಲ್ಲಿ ಆಚರಿಸಿ ತೋರಿಸಿಕೊಟ್ಟವರು ಎಂದು ಬಣ್ಣಿಸಿದರು. ದೇಶ ಪ್ರಗತಿ ಕಾಣಬೇಕಾದರೆ ಶ್ರಮಜೀವಿಗಳಿಗೆ ಗೌರವ ಸಲ್ಲಬೇಕು ಎಂಬುದನ್ನು ಬಸವಣ್ಣ ತೋರಿಸಿಕೊಟ್ಟಿದ್ದಾರೆ. ನಾನಾ ಕಾಯಕದಲ್ಲಿ ನಿರತರಾದವರಿಗೆ ಸಮಾಜದಲ್ಲಿ ಉನ್ನತ ಸ್ಥಾನ ದೊರೆಯುವಂತೆ ಮಾಡಿದರು. ಯಾವ ಕಾಯಕವೂ ಕೀಳಲ್ಲ ಎಂಬುದನ್ನು ಜನರಿಗೆ ಮನದಟ್ಟು ಮಾಡಿಕೊಟ್ಟರು. ಇದರಿಂದ ಜನರಲ್ಲಿ ಕಾಯಕ ಸಂಸ್ಕೃತಿ ಬೆಳೆಯಿತು. ಇಂದು ಈ ಸಂಸ್ಕೃತಿಯ ಅಗತ್ಯವಿದೆ ಎಂದರು.

ಬಸವೇಶ್ವರರು ಸ್ಥಾಪಿಸಿದ್ದ ಅನುಭವ ಮಂಟಪ ದೇಶದ ಜನರಿಗೆ ಇತಿಹಾಸದಲ್ಲಿ ಮಹತ್ವದ ಸ್ಥಾನ ಪಡೆದಿದೆ. ಆಧ್ಯಾತ್ಮಿಕ ಚಿಂತನೆ ಮೂಲಕ ಪ್ರಜಾತಂತ್ರವನ್ನು ಸ್ಥಾಪಿಸಿರುವ ಅವರ ಹಿರಿಮೆ. ಬಿಜ್ಜಳನ ಸಾಮ್ರಾಜ್ಯದಲ್ಲಿ ಮಂತ್ರಿಯಾಗಿ ಅವರು ನಡೆದುಕೊಂಡ ರೀತಿ ಇಂದಿನ ಎಲ್ಲ ಜನಪ್ರತಿನಿಧಿಗಳಿಗೆ ಮಾದರಿ. ಇಂದು ಸಾರ್ವಜನಿಕ ಜೀವನದಲ್ಲಿ ಮಾನವೀಯ ಮೌಲ್ಯಗಳು ಕುಸಿಯುತ್ತಿವೆ. ಇಂಥ ಸಂದರ್ಭದಲ್ಲಿ ಬಸವಣ್ಣನವರು ಪ್ರಸ್ತುತರಾಗುತ್ತಾರೆ ಎಂದರು. ಮಹಿಳೆಯರಿಗೆ ಬಸವೇಶ್ವರರು ನೀಡಿದ ಮಹತ್ವ ಹಾಗೂ ಸ್ಥಾನಮಾನವನ್ನು ಇಂದು ಅಧಿಕಾರದಲ್ಲಿರುವವರು ಗಮನಿಸಬೇಕು. ಮುಂದಿನ ಜನಾಂಗ

ಬಸವೇಶ್ವರರ ತತ್ವಗಳ ಮೂಲಕ ಸ್ವಾಭಿಮಾನಿ ಬದುಕನ್ನು ಕಂಡುಕೊಳ್ಳುತ್ತಾರೆ ಎಂಬ ವಿಶ್ವಾಸವಿದೆ ಎಂದರು.

ಬಸವೇಶ್ವರರ ಹೆಸರಿನಲ್ಲಿ ೫ ರೂ. ನಾಣ್ಯ ಹೊರಬಂದುದಕ್ಕೆ ಕೇಂದ್ರ ಹಣಕಾಸು ಸಚಿವ ಪಿ.ಚಿದಂಬರಂ, ಕೇಂದ್ರ ಯೋಜನಾ ಸಚಿವ ಎಂ.ವಿ. ರಾಜಶೇಖರನ್ ಹರ್ಷ ವ್ಯಕ್ತಪಡಿಸಿದರು. ಇದರ ಮೂಲಕ ಬಸವಣ್ಣನವರ ಜೀವನ ಸಂದೇಶ ಎಲ್ಲ ವರ್ಗಗಳನ್ನು ತಲುಪಲಿದೆ ಎಂದರು.

ದಿವಂಗತ ಮುಖ್ಯಮಂತ್ರಿ ಜೆ.ಎಚ್. ಪಟೇಲ್ ಅವರನ್ನು ನೆನಪಿಸಿಕೊಂಡ ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿ ಕೂಡಲಸಂಗಮದ ಮಾದರಿಯಲ್ಲೇ ಬಸವಕಲ್ಯಾಣವನ್ನೂ ಅಭಿವೃದ್ಧಿಪಡಿಸಲಾಗುವುದು. ಇದಕ್ಕಾಗಿ 20 ಕೋಟಿ ರೂ. ವೆಚ್ಚ ಮಾಡಲಾಗುವುದು. ಇನ್ನು ಮುಂದೆ ಬಸವ ಜಯಂತಿಯನ್ನು ನಾಡಹಬ್ಬವನ್ನಾಗಿ ಆಚರಿಸಲಾಗುವುದು ಎಂದು ಪ್ರಕಟಿಸಿದರು. 23,500 ವಚನಗಳಿದ್ದು, ಅವುಗಳ ಸಂಗ್ರಹವನ್ನು ಪ್ರಕಟಿಸುವ ಕಾರ್ಯ ಕೈಗೊಳ್ಳಲಾಗಿದೆ. ವಿದೇಶಿ ಭಾಷೆಗಳಿಗೂ ಇವುಗಳನ್ನು ಅನುವಾದಗೊಳಿಸಬೇಕಿದೆ ಎಂದರು. ಬುದ್ಧನ ನಂತರ ದಾರ್ಶನಿಕ ಎಂದರೆ ಬಸವಣ್ಣ. ಅವರು ಸ್ಥಾಪಿಸಿದ ಅನುಭವ ಮಂಟಪವೇ ಇಂದಿನ ಪಾರ್ಲಿಮೆಂಟಿಗೆ ನಾಂದಿಯಾಯಿತು ಎಂದು ಉಪಮುಖ್ಯಮಂತ್ರಿ ಯಡಿಯೂರಪ್ಪ ಹೇಳಿದರು.

ರಾಜ್ಯಪಾಲ ಟಿ.ಎನ್. ಚತುರ್ವೇದಿ ಕೇಂದ್ರ ಸಚಿವ ಕೆ.ಎಚ್. ಮುನಿಯಪ್ಪ, ಪ್ರತಿಪಕ್ಷ ನಾಯಕ ಧರ್ಮಸಿಂಗ್, ವಿಶ್ವನಾಥ ರೆಡ್ಡಿ ಮದ್ನಾಳ್ ಭಾಗವಹಿಸಿದ್ದರು. ಬಸವ ಸಮಿತಿ ಅಧ್ಯಕ್ಷ ಅರವಿಂದ ಜತ್ತಿ ಸ್ವಾಗತಿಸಿದರು. ದೂರದರ್ಶನದ ಚಂದನ ಚಾನೆಲ್‌ನಲ್ಲಿ ಕಾರ್ಯಕ್ರಮ ನೇರ ಪ್ರಸಾರವಾಯಿತು. ಸಮಾರಂಭದಲ್ಲಿ ಆದಿಚುಂಚನಗಿರಿ, ಚಿತ್ರದುರ್ಗದ ಮುರುಘಾಮಠ, ಬೆಲಿಮಠ ಸೇರಿದತೆ ಎಲ್ಲ ಪ್ರಮುಖ ಮಠಗಳ ಧಾರ್ಮಿಕ ಗುರುಗಳು ಭಾಗವಹಿಸಿದ್ದರು.

5ರೂ. ಹಾಗೂ 100ರೂ. ಮುಖ ಬೆಲೆಯ ಬಸವ ನಾಣ್ಯ ಬಿಡುಗಡೆಗೊಂಡಿದ್ದು, ೫ ರೂ. ನದ್ದು ಚಲಾವಣೆಗೆ ಬರಲಿದೆ. ೧೦೦ ರೂ.ನದ್ದು ಬಸವ ಸಮಿತಿಯನ್ನು ಸಂಪರ್ಕಿಸಬೇಕು. ೧೦೦ ರೂ.ಗಳ ಬೆಳ್ಳಿ ನಾಣ್ಯಕ್ಕೆ ೨ ಸಾವಿರ ರೂ. ಆಗಲಿದೆ. ಇದು ಚಲಾವಣೆಗೆ ಅಲ್ಲ. ಸಂಗ್ರಹಕ್ಕೆ ಮಾತ್ರ ಎಂದು ಬಸವ ಸಮಿತಿ ಕಾರ್ಯಕರ್ತರು ತಿಳಿಸಿದರು.

ಕೃಪೆ : ವಿಜಯ ಕರ್ನಾಟಕ

### ಬಸವ ಧರ್ಮ ಸೂತ್ರಗಳು

| | |
|---|---|
| ಧರ್ಮಗುರು | – ವಿಶ್ವಗುರು ಬಸವಣ್ಣನವರು |
| ಧರ್ಮಗ್ರಂಥ | – ಬಸವಾದಿ ಶರಣರ ವಚನಗಳು |
| ಧರ್ಮದೇವರು | – ಇಷ್ಟಲಿಂಗ |
| ಧರ್ಮಕೇಂದ್ರ | – ಬಸವಕಲ್ಯಾಣ |
| ಧರ್ಮಕ್ಷೇತ್ರ | – ಕೂಡಲಸಂಗಮ |
| ಧರ್ಮಧ್ವಜ | – ಷಟ್‌ಸ್ಥಲ ಧ್ವಜ |
| ಧರ್ಮಭಾಷೆ | – ಕನ್ನಡ |
| ಧರ್ಮಧ್ಯೇಯ | – ಕಲ್ಯಾಣರಾಜ್ಯ ನಿರ್ಮಾಣ |

### ಬಸವ ಧರ್ಮ ತತ್ವಗಳು

| | |
|---|---|
| ಅಷ್ಟಾವರಣ : | ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ ಮಂತ್ರ |
| ಪಂಚಾಚಾರ : | ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ |
| ಷಟ್‌ಸ್ಥಲ : | ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಐಕ್ಯ ಸ್ಥಲಗಳು |
| ಯೋಗ : | ಲಿಂಗಾಂಗಯೋಗ, (ಶಿವಯೋಗ) |







# ಬಸವಣ್ಣನವರ ವಚನಗಳಲ್ಲಿ ಸ್ವರ್ಗ–ನರಕ

–ಡಾ.ವ್ಹಿ.ವ್ಹಿ. ಬಾಗಲಕೋಟೆ, ವಿಶ್ರಾಂತ ಪ್ರಿನ್ಸಿಪಾಲರು ಮತ್ತು ಪ್ರಾಧ್ಯಾಪಕರು, ಕ.ಹೌ.ಕಾಲೋನಿ, ಗೋಕಾಕ–591 307.

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ
ಕಾಣಿರೋ! ಸತ್ಯವ ನುಡಿವುದೇ ದೇವಲೋಕ ಮಿಥ್ಯವ
ನುಡಿವುದೇ ಮರ್ತ್ಯಲೋಕ; ಆಚಾರವೇ ಸ್ವರ್ಗ,
ಅನಾಚಾರವೇ ನರಕ
ಕೂಡಲಸಂಗಮದೇವಾ ನೀವೇ ಪ್ರಮಾಣು.

ಎನ್ನುವ ಬಹುಶೃತ ಬಸವಣ್ಣನವರ ವಚನವನ್ನು ಅರಿತುಕೊಳ್ಳಲು ಪ್ರಯತ್ನಿಸೋಣ.

ಸ್ವರ್ಗಲೋಕ, ನರಕ ಇವುಗಳ ಕಲ್ಪನೆಗಳು ತಲೆತಲಾಂತರಗಳಿಂದ ಬಂದವುಗಳು. ಇವು ಹಲವು ಧರ್ಮಗಳಲ್ಲಿ ಪ್ರಚಲಿತವಿದೆ. ಸ್ವರ್ಗ ಅಥವಾ ದೇವಲೋಕದಲ್ಲಿರುವುದು, ಶಾಂತಿ, ಸುಖ ಸಂಪತ್ತು ವ್ಯವಸ್ಥೆ, ಸೌಂದರ್ಯ ಸಂತೋಷ ಇತ್ಯಾದಿಗಳ ಸಾಗರ. ಅಲ್ಲಿರುವ ದೇವತೆಗಳು ಅಮರರು.

ಮರ್ತ್ಯಲೋಕದಲ್ಲಿರುವವರು ಮೃತ್ಯುವನ್ನು ಹೊಂದಿದ ಮಾನವರಾದಿ ಜೀವಿಗಳು. ಮಾನವರದು, ತಮ್ಮ ಸುತ್ತಲಿನ ಪರಿಸರಕ್ಕನುಗುಣವಾಗಿ ಉದ್ಯೋಗ ಕಾರ್ಯ ಗಳಿಗನುಸಾರವಾಗಿ ಜೀವನ. ಒಮ್ಮೊಮ್ಮೆ ಪ್ರಾರಬ್ಧ, ಹಣೆಬರಹಗಳ ಪಾತ್ರಗಳೂ ಇರುವುದೆಂದು ಹೇಳುವುದುಂಟು

ಇನ್ನು ನರಕದಲ್ಲಿರುವುದು, ಅವ್ಯವಸ್ಥೆ, ಅಸಹ್ಯ, ಯಾತನಾಮಯ ಜೀವನ, ಅಸಾಧ್ಯ ಕಷ್ಟ, ಕ್ರೂರತೆ, ಅನಾಗರಿಕ ಜೀವನ ಕ್ರಮಗಳ ಆಗರ; ಎಂಬ ಸಾಮಾನ್ಯ ಕಲ್ಪನೆಗಳು ರೂಢಿಯಲ್ಲಿವೆ. ಜಗತ್ತಿನ ಧರ್ಮಗಳಲ್ಲಿ ಪಾಪ ಪುಣ್ಯಗಳ ಕಲ್ಪನೆಗಳಂತೂ ಇದ್ದೇ ಇವೆ. ಧರ್ಮಗಳ ಮೂಲ ತತ್ವಗಳಲ್ಲಿ ಪಾಪ, ಪುಣ್ಯಗಳಿಗೆ ಅಗ್ರಸ್ಥಾನ. ಪಾಪಕಾರ್ಯಗಳಿಂದ ದೂರವಿರುವುದಕ್ಕೂ, ಪುಣ್ಯಗಳನ್ನು ಗಳಿಸುವಂಥ ಕಾರ್ಯಗಳನ್ನು ಮಾಡುವುದಕ್ಕೂ ಧರ್ಮಗಳು ಬೋಧಿಸುವುದುಂಟು. ಇಷ್ಟಲ್ಲದೆ ಪಾಪಕಾರ್ಯಗಳನ್ನಿಲ್ಲಿ ಮಾಡಿದವರಿಗೆ, ಮುಂದೆ ಮರಣಾನಂತರ ಅವರ ಆತ್ಮವು ನರಕಕ್ಕೂ, ಪುಣ್ಯ ಕಾರ್ಯಗಳನ್ನು ಮಾಡಿದವರ ಆತ್ಮಗಳು ಮರಣಾನಂತರ, ಸ್ವರ್ಗಕ್ಕೂ ಹೋಗುವವೆಂಬ ನಂಬುಗೆ. ಇವೆಲ್ಲವುಗಳ ಕಾರಣದಿಂದಾಗಿ, ತಿಳಿದೊ ತಿಳಿಯದೆಯೊ ಪಾಪಕಾರ್ಯಗಳನ್ನು ಜೀವನದಲ್ಲಿ ಮಾಡಿದ ವ್ಯಕ್ತಿಗೆ, ಸ್ವರ್ಗ ಪ್ರಾಪ್ತಿಯ ಮಾರ್ಗವಾಗಿ, ಕ್ಷಮಾಯಾಚನಾ ಕ್ರಮಗಳೂ, ದೇವನಲ್ಲಿ ಪ್ರಾರ್ಥಿಸುವುದೂ ಇತ್ಯಾದಿ ಸಂಪ್ರದಾಯಗಳು ಧರ್ಮಗಳಲ್ಲಿವೆ. ಆಯಾ ಧರ್ಮಗಳಲ್ಲಿ ಸತ್–ಆಚರಣೆಗಳನ್ನು ವಿಧಿಸಿದ್ದಾರೆ. ನಿಯಮಗಳ ಉದ್ದೇಶಗಳು ಒಳ್ಳೆಯವಾಗಿದ್ದರೂ, ವ್ಯವಹಾರದಲ್ಲಿ ಅತಿಯಾಶೆ ಸುಖಕ್ಕೆ ಶೀಘ್ರ ಹಾಗೂ ಲಘು ಮಾರ್ಗಗಳ ಸಲುವಾಗಿ ಆ ನಿಯಮಗಳನ್ನು ಲಘುವಾಗಿ ಪರಿಗಣಿಸುವವರೂ ಇದ್ದಾರೆ. ಮತ್ತೆ ಮುಂದೆ ಮರಣಾನಂತರ ಆಗುವ ಶಿಕ್ಷೆಗಳಿಗೆ ಈಗೇಕೆ ಚಿಂತೆ ಎಂಬುವ ಮನೋಭಾವದವರೂ; ಸ್ವರ್ಗ ನರಕಗಳು ಇರುವವೋ? ಇಲ್ಲವೋ? ಎಂಬ ವಾದಗಳೂ; ಇರಬಹುದಾಗಿದೆ.

ಇವೆಲ್ಲಗಳಿಗೆ ಉತ್ತರವೆಂಬಂತೆ, ಬಸವಣ್ಣನವರ ಪ್ರಸ್ತುತ ವಚನವಿದೆ. ಇಲ್ಲಿ–ಧರ್ಮಗಳ ಸಂಪ್ರದಾಯಿಗಳು ಏನೇ ಹೇಳಿದರೂ ಬಸವಣ್ಣನವರು ನೇರವಾಗಿ ಸ್ವರ್ಗಲೋಕ (ದೇವಲೋಕ), ಮರ್ತ್ಯಲೋಕ ಬೇರಿಲ್ಲ ಕಾಣಿರೊ ಎಂದಿದ್ದಾರೆ. ಈ ವ್ಯವಹಾರಿಕ ಹೇಳಿಕೆಯು ನೈಜತೆಯ ಸಾನ್ನಿಧ್ಯದ್ದು, ಕ್ರಾಂತಿಕಾರಕವಾಗಿದ್ದು ವೈಜ್ಞಾನಿಕ ತರ್ಕಬದ್ಧ ಚಿಂತನೆಗೆ ಒಪ್ಪಿಗೆಯಾಗುವಂಥದ್ದಾಗಿದೆ.

ಮರ್ತ್ಯಲೋಕವೆಂಬುದು ನಾವು ನಿತ್ಯ ಕಾಣುವ ಆದರೆ, ಮರಣಾನಂತರ ಸ್ವರ್ಗ ಇಲ್ಲವೆ ದೇವಲೋಕವೆಂಬುದೊಂದು ಬೇರೆಯೇ ಇದ್ದುದ್ದನ್ನು ಕಂಡದ್ದೂ ಇಲ್ಲ. ಅದೊಂದು ಒಳ್ಳೆಯ ಉದ್ದೇಶದ ಕಾಲ್ಪನಿಕ ಸೃಷ್ಟಿ ಇರಬಹುದೆಂಬುದು ಅಂತರಾರ್ಥ.

ಅವರು ಸ್ವರ್ಗವನ್ನು ಇಲ್ಲವೇ ಸ್ವರ್ಗ ಸದೃಶ ವಾತಾವರಣವನ್ನೂ ನಿರ್ಮಿಸಿ ಸುಖಪಡುಬಹುದೆಂದೂ, ಇಲ್ಲವೆ ನರಕದಲ್ಲಿರುವ ವಾತಾವರಣದ ಸಮಾನ ವಾತಾವರಣವನ್ನು, ಇಲ್ಲಿಯೇ ನಾವಿರುವ ಲೋಕದಲ್ಲಿಯೇ ಉಂಟು ಮಾಡಿ ಯಾತನೆಯನ್ನನುಭವಿಸಬಹುದೆಂದೂ ತಿಳಿಸಿದ್ದಾರೆ. ಅಲ್ಲದೆ, ಸ್ವರ್ಗ ಪರಿಸರವನ್ನು ನಿರ್ಮಾಣ ಮಾಡುವ ವಿಧಾನವನ್ನೂ, ನರಕವು ಹೇಗಾಗುತ್ತದೆ ಎಂಬುದನ್ನೂ ಹೇಳಿದ್ದಾರೆ. ಹಾಗಾದರೆ ಆ ವಿಧಾನಗಳಾವುವು?

*'ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ*

ಸತ್ಯವೆಂಬುದು ದೇವ ನಿರ್ಮಿತ. ದೇವತ್ವಕ್ಕೂ ಸತ್ಯಕ್ಕೂ ಅಂತರವಿಲ್ಲದಷ್ಟು ಸಾಮಿಪ್ಯ. ಸತ್ಯವ ನುಡಿಯುವಲ್ಲಿ, ಅವ್ಯವಹಾರ, ಮೋಸ, ಅನ್ಯಾಯಗಳ ಸುಳಿವಿರುವುದಿಲ್ಲ. ಸುತ್ತಲಿನವರೂ ಸತ್ಯವಂತರಿದ್ದಾಗ ಘರ್ಷಣೆ, ವ್ಯಾಜ್ಯಗಳು ದೂರಾಗಿ, ಸಹಕಾರ ಒಕ್ಕಟ್ಟು, ಸ್ನೇಹ ವಾತಾವರಣ ನಿರ್ಮಾಣವಾಗಿ ಸ್ವರ್ಗಸದೃಶ ಜೀವನವು ಸಾಧ್ಯವಾಗುತ್ತದೆ.

ಇದೇ ಅರ್ಥದಲ್ಲಿ ಸತ್ಯವ ನುಡಿವುದೇ ದೇವಲೋಕ ಎಂದಿದ್ದಾರೆ ಬಸವಣ್ಣನವರು.

ಇನ್ನು, ಮಿಥ್ಯವ ನುಡಿವುದೇ ಮರ್ತ್ಯಲೋಕವೆಂದಿರುವಲ್ಲಿ ನಾವಿರುವ ಜಗತ್ತಿನಲ್ಲಿ ನಡೆಯುತ್ತಿರುವ ವಾಸ್ತವಿಕ ವ್ಯವಹಾರಗಳ ಹಿನ್ನಲೆಯಿದೆ. ಒಬ್ಬರಿಗಿಂತ ಇನ್ನೊಬ್ಬರು ಹೆಚ್ಚು ಶ್ರೀಮಂತರಾಗಬೇಕೆಂದು, ಯಾವುದೇ ಹಾದಿಯಿಂದಲಾದರೂ ಶ್ರೇಷ್ಠತೆಯನ್ನು ಪಡೆಯಬೇಕೆಂಬುವ ಮಹತ್ವಾಕಾಂಕ್ಷಿಗಳು, ಸತ್ಯವನ್ನು ನುಡಿಯುವುದು ವಿರಳ. ಮಿಥ್ಯವೇ ಅಂಥವರಿಗೆ ತಾತ್ಕಾಲಿಕ ಲಾಭಕ್ಕೆ ಉಪಯುಕ್ತವಾಗಿರುತ್ತದೆ. ಇಂಥವರಿರುವ ಜಗತ್ತಿಗೆ ಮರ್ತ್ಯಲೋಕವೆನ್ನುವುವು.

ಸ್ವರ್ಗವನ್ನು ನಿರ್ಮಿಸುವ ಹಾದಿಯನ್ನು 'ಆಚಾರವೇ ಸ್ವರ್ಗ' ಎಂಬುವಲ್ಲಿ ತೋರಿಸಿಕೊಟ್ಟಿದ್ದಾರೆ. ನಿತ್ಯ ಜೀವನದಲ್ಲಿ ಸರಿ-ತಪ್ಪು ಪಾಪ-ಪುಣ್ಯ, ನ್ಯಾಯ-ಅನ್ಯಾಯ ಅವುಗಳನ್ನು ತಿಳಿಸುವುದಕ್ಕೋಸ್ಕರ ಸತ್-ಆಚಾರಗಳೆಂಬುವನ್ನು ಧಾರ್ಮಿಕ ಮತ್ತು ಸಮಾಜದ ಮುಖಂಡರು ನಿರ್ಧರಿಸಿದ್ದಾರೆ. ಬಸವಣ್ಣನವರ ಸಪ್ತಾದೇಶಗಳಾದ, ತನ್ನ ಬಣ್ಣಿಸ ಬೇಡ, ಮುನಿಯ ಬೇಡ; ಇವುಗಳನ್ನು ಅಂತರಂಗ ಬಹಿರಂಗ ಶುದ್ಧಿಗಳಷ್ಟೇ ಅಲ್ಲದೆ, ಸದಾಚಾರಗಳೆಂದೂ ಪರಿಗಣಿಸಬಹುದು. ಸತ್-ಆಚಾರದಲ್ಲಿ ಸಮಾಜದಲ್ಲಿಯ ಪ್ರತಿ ವ್ಯಕ್ತಿ ನಡೆದದ್ದಾದರೆ ಸರಿಯಾದ, ನ್ಯಾಯಯುತ, ಪುಣ್ಯಪ್ರದ ವಾತಾವರಣ ನಿರ್ಮಾಣವಾಗಿ, ನಮ್ಮ ಸುತ್ತಲೇ ನಾವಿರು ವಾಗಲೇ ಸ್ವರ್ಗವನ್ನು ನಿರ್ಮಿಸುತ್ತೇವೆ. ಅದರಲ್ಲಿಯೇ ಇರುತ್ತೇವೆ. ಮರಣಪರ್ಯಂತ ಕಾಯ ಬೇಕಿಲ್ಲ. ಇದನ್ನೇ ಸರ್ವಜ್ಞ ಕವಿಯು 'ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಾಣವಕ್ಕು ಸರ್ವಜ್ಞ' ಎಂದಿದ್ದಾರೆ.

ಇನ್ನು ಸತ್-ಆಚಾರಗಳನ್ನು ಬಿಟ್ಟು ಅನಾಚಾರಗಳಲ್ಲಿ ನಡೆದದ್ದಾದರೆ ಮಾನವನನ್ನು ಅನ್ಯಾಯದ, ಪಾಪದ ತಪ್ಪು ಮಾರ್ಗದಲ್ಲಿ ಕ್ರಮಿಸುವಂತೆ ಮಾಡಿ, ನರಕದ ಪರಿಸರವನ್ನು ನಿರ್ಮಿಸುತ್ತದೆ, ದೈನಂದಿನ ಜೀವನದಲ್ಲಿಯ ಒಂದು ಸಣ್ಣ ಉದಾಹರಣೆಯನ್ನು ಅಣ್ಣನವರೇ ಹೇಳಿದ್ದಾರೆ. ಇಬ್ಬರ ಸಂಭಾಷಣೆಯಲ್ಲಿ, ಒಬ್ಬರು ಇನ್ನೊಬ್ಬರಿಗೆ, 'ಅಯ್ಯಾ ಎಂದರೆ ಸ್ವರ್ಗ ಎಲವೋ ಎಂದರೆ ನರಕ' ಎಂಬುವಲ್ಲಿ ಪ್ರತಿಕ್ಷಣದಲ್ಲಿ ವಾತಾವರಣವನ್ನು ಹೇಗೆ ಬದಲಿಸ ಬಹುದೆಂದು ತಿಳಿಸಿದ್ದಾರೆ. ಹೀಗೆ ಸ್ವರ್ಗ ಸುಖಬೇಕಿದ್ದರೆ ಅನಾಚಾರದಿಂದ ದೂರಿರಬೇಕು. ಸದಾಚಾರದಿಂದ ಸ್ವರ್ಗ ವನ್ನನುಭವಿಸಬೇಕು.

'ಕಾಯಕವೇ ಕೈಲಾಸ'ವೆಂಬುದು ಬಸವಣ್ಣನವರ ವಿಶ್ವಮಾನ್ಯ ಹಿತೋಪದೇಶ. ಈ ತತ್ವವನ್ನು ಪವಿತ್ರ ಆದೇಶ (Holy Commandment) ಎಂದು ತಿಳಿದು ದೈನಂದಿನ ಆಚರಣೆಯಲ್ಲಿ ತಂದವರು ಶರಣರೆಂದೆನಿಸುವುದರಲ್ಲಿ ಸಂದೇಹವಿಲ್ಲ.

ಕೈಲಾಸವು ಶಿವನ ನಿವಾಸ. ಕಾಯಕ ನಿರತನು ಕೈಲಾಸದಲ್ಲಿ ಇಲ್ಲವೆ ಶಿವನ ಸಾನ್ನಿಧ್ಯದಲ್ಲಿದಂತೆ ಎಂದಿದ್ದಾರೆ ಬಸವಣ್ಣನವರು. ಆದ್ದರಿಂದ ಅವರು ಸ್ವರ್ಗದಲ್ಲಿದ್ದಂತೆಯೇ ಎಂದಾಯಿತು.

ಮಾನವನಿಗೆ ಉಪಜೀವನಕ್ಕೆ ಒಂದು ಉದ್ಯೋಗ ಬೇಕು. ಕೈಗೊಂಡ ಉದ್ಯೋಗವನ್ನು ಅದು ಯಾವುದೇ ಇದ್ದರೂ, ಶ್ರದ್ಧೆ, ಭಕ್ತಿ, ಪ್ರಾಮಾಣಿಕತೆ, ನಿರ್ವಂಚನಾಭಾವ, ಶುದ್ಧಾಂತಃಕರಣ ಸೇವಾ ಭಾವನೆಯಿಂದ ನಿರ್ವಹಿಸಿದರೆ ಅದು ಕಾಯಕವಾಗುತ್ತದೆ. ಹಾಗೆ ಕಾಯಕ ಮಾಡುತ್ತಿರುವಾಗ ಸ್ವರ್ಗಸುಖದ ಅನುಭವವಾಗುತ್ತವೆ, ಇದು ಬಡವ ಮೊದಲಾಗಿ ಎಲ್ಲರಿಗೂ ಅನ್ವಯವಾಗುವಂಥಹುದು. ಹೀಗಿದ್ದಾಗ ಸ್ವರ್ಗಸುಖವು ಶ್ರೀಮಂತರಿಗೆ ಮಾತ್ರ ಲಭ್ಯವಾದದ್ದು. ಬಡವನಿಗೆ ನಿಲುಕಲಾರದ್ದು ಎನ್ನುವಂತಿಲ್ಲ.

ಇದನ್ನೇ ತಿಳಿಗೊಳಿಸುವ ಒಂದು ಕಾಲ್ಪನಿಕ ಕತೆ ಇದೆ. ಹಿಂದೊಮ್ಮೆ ರೀಡರ್ಸ್ ಡಾಯಜೆಸ್ಟ್ ತಲೆಬರಹದ ಇಂಗ್ಲೀಷ್ ಮಾಸಿಕದಲ್ಲಿ ಓದಿದ ನೆನಪು. ವೈಜ್ಞಾನಿಕ ಮನೋಭಾವವು ಹೇಗೆ ನರಕವನ್ನು ಕೂಡ ಸ್ವರ್ಗವನ್ನಾಗಿ ಪರಿವರ್ತಿಸಬಹುದು ಎಂಬುದನ್ನು ತೋರಿಸುತ್ತದೆ.

ಕ್ರೈಸ್ತ ಮತದ ವಿಜ್ಞಾನಿಯೊಬ್ಬ ತನ್ನ ಆಯುಷ್ಯವೆಲ್ಲ ದುಡಿದು ತನ್ನ ಜೀವನದ ಕೊನೆಯ ಹಂತದಲ್ಲಿದ್ದ. ಮರಣ ಸಮೀಪಿಸಿತೆಂಬ ಅನುಮಾನದಿಂದ, ಪದ್ಧತಿಯ ಪ್ರಕಾರ ಪಾದ್ರಿಯನ್ನು ಕರೆಯಕಳಿಸಿದ. ಧಾರ್ಮಿಕ ಸಂಪ್ರದಾಯದ ಪ್ರಕಾರ ವ್ಯಕ್ತಿಯು ಕೊನೆಯುಸಿರೆಳೆಯುವ ಮುನ್ನ, ಪಾದ್ರಿಯು ಮರಣಶಯ್ಯೆಯ ಮಗ್ಗುಲಲ್ಲಿರಬೇಕಾಗಿತ್ತು. ವ್ಯಕ್ತಿಯು ತನ್ನ ಜೀವಿತ ಕಾಲದಲ್ಲಿ ಮಾಡಿರಬಹುದಾದ ಪಾಪಕಾರ್ಯಗಳ ಸಲುವಾಗಿ ದೇವನಿಗೆ ತಪ್ಪೊಪ್ಪಿಕೊಂಡು, ಅವನಿಂದ ಕ್ಷಮೆಯಾಚಿಸಿಬೇಕಾಗಿತ್ತು. ಪಾದ್ರಿಯು ದೇವನಿಗೆ ವ್ಯಕ್ತಿಯ ಮೇಲೆ ಕರುಣೆ ತೋರಿ ಕ್ಷಮಿಸಲಿಕ್ಕೆ ತಾನು ಅವನ ಪರವಾಗಿ ಪ್ರಾರ್ಥಿಸಬಹುದಾಗಿತ್ತು. ಸ್ವರ್ಗಕ್ಕೆ ದಾರಿ ಸುಗಮ ಮಾಡಿಕೊಡುವುದು (Confession) ತಪ್ಪೊಪ್ಪಿಗೆಯ ಉದ್ದೇಶ.

ಆದರೆ ಕಾರಣಾಂತರಗಳಿಂದ ಪಾದ್ರಿಯು, ವಿಜ್ಞಾನಿಯ ಮನೆಯನ್ನು ಸಕಾಲದಲ್ಲಿ ತಲುಪಲು ಸಾಧ್ಯವಾಗಲಿಲ್ಲ. ಪಾದ್ರಿಯು ಬರುವವದರೊಳಗಾಗಿ ವಿಜ್ಞಾನಿ ಕೊನೆಯುಸಿರೆಳೆದಿದ್ದ.

ತಡವಾಗಿ ಬಂದ ಪಾದ್ರಿಯು ವಿಜ್ಞಾನಿಯು ತಪ್ಪೊಪ್ಪಿಗೆ ಇಲ್ಲದೇ ತೀರಿದ್ದರಿಂದ, ಅವನಿಗೆ ಸ್ವರ್ಗಪ್ರಾಪ್ತಿಯಾಗುವುದಿಲ್ಲವೆಂದು ನೊಂದುಕೊಂಡನು. ವಿಜ್ಞಾನಿಯ ಆತ್ಮದ ಮೇಲೆ ಮರುಕಗೊಂಡು, ಕರುಣೆಯಿಂದ ತಡವಾಗಿಯಾದರೂ ತಿಳಿಸುಕೊಂಡಿದ್ದ ಪರಿಸ್ಥಿತಿಯೇ ಇತ್ತು. ಇದು ನರಕವೇ,





ಚಿಂತೆಯಿಲ್ಲ.. ಅವನಾತ್ಮವು ಇದ್ದಲ್ಲಿಗೇ ಹೋಗಿ, ತಪ್ಪೊಪ್ಪಿಗೆ ವಿಧಾನವನ್ನು ಏರ್ಪಡಿಸಿಕೊಂಡು ಅವನಾತ್ಮಕ್ಕೆ ಸ್ವರ್ಗದಲ್ಲಿ ಸದ್ಗತಿ ದೊರಕಿಸಿಕೊಡಬೇಕೆಂದು ನಿರ್ಧರಿಸಿದನು. ಈ ಕಾಲ್ಪನಿಕ ಕತೆಯಲ್ಲಿ, ಪಾದ್ರಿಯು ವಿಜ್ಞಾನಿಯ ಆತ್ಮವಿರುವ 'ನರಕ' ಸ್ಟೇಷನ್ನಿಗೆ ಟಿಕೆಟ್ ಪಡೆದುಕೊಂಡು ರೈಲು ಹತ್ತಿದನಂತೆ. ರೈಲಿನ ಕಿಟಕಿಯ ಮುಖಾಂತರ ಹಿಂದೆ ಸಾಗುತ್ತಿರುವ ನಿಸರ್ಗವನ್ನು ವೀಕ್ಷಿಸುತ್ತಿದ್ದನು. ತಲುಪಬೇಕಿದ್ದ ರೈಲು ನಿಲ್ದಾಣ ಇನ್ನೂ ನಾಲ್ಕೈದು ನಿಲ್ದಾಣಗಳ ಆಚೆ ಇರುತ್ತಿರುವಾಗ ಹೆಚ್ಚು ಆಸಕ್ತಿಯಿಂದ ಸುತ್ತಲಿನ ಪರಿಸರವನ್ನು ಅಭ್ಯಸಿಸತೊಡಗಿದನು. ಸಹಜವಾದ ಹಿಂದಿನ ಪರಿಸರಕ್ಕಿಂತಲೂ ಭಿನ್ನವಾದದ್ದೇನೂ ಕಾಣಸಿಗಲಿಲ್ಲ. ಇನ್ನು ಒಂದೋ ಎರಡೋ ನಿಲ್ದಾಣಗಳಾಚೆ ತಲುಪಬೇಕಾಗಿದ್ದ ಪರಿಸರದಲ್ಲಿ ಯಾವ ವ್ಯತ್ಯಾಸಗಳು ಕಾಣ ಬರುತ್ತವೆಯೋ ಎಂದು ನೋಡುತ್ತಿದ್ದನು. ನಿರೀಕ್ಷಿಸುತ್ತಿದ್ದುದು ಅವ್ಯವಸ್ಥೆ. ಆದರೆ, ನರಕ ಸ್ಟೇಷನ್ ಸಮೀಪಿಸುತ್ತಿರುವಾಗ ಕಂಡದ್ದು ಪೈರು ತುಂಬಿದ್ದ ಭೂಮಿ, ಸಾಲುಗಳಲ್ಲಿದ್ದ ಫಲಭರಿತ ಮರಗಳು ಅಚ್ಚುಕಟ್ಟಾಗಿ ನಿರ್ಮಿಸಿದ ಮಾರ್ಗಗಳ ಮಗ್ಗಲು ಕಾಲುವೆಗಳು. ಹಾಗೂ ಕಾಲುವೆಗೆ ಹೊಂದಿ, ತೆನೆಗಳಿಂದ ತುಂಬಿದ ಬೆಳೆಗಳುಳ್ಳ ತೋಟಗಳೂ, ಹೊಲಗಳೂ, ಕಾಣತೊಡಗಿದವು. ತೋಟದ ಮನೆಗಳಲ್ಲಿರುವ ದನಕರುಗಳ ಧ್ವನಿಗಳೂ ಆಕಾಶದಲ್ಲಿ ಹಾರಾಡುವ ಪಕ್ಷಿಗಳ ಕಲರವವೂ ಕೇಳಿಬಂದವು.

ಈ ದೃಶ್ಯವು ಪಾದ್ರಿಯವರ ಮನದಲ್ಲಿ ಅನುಮಾನಕ್ಕೆ ಎಡೆಮಾಡಿತು. ತಾನು ತಲುಪಬೇಕಾಗಿರುವ ಸ್ಟೇಷನ್ ಸಮೀಪವಿರುವುದು ಸಾಧ್ಯವಿಲ್ಲವೆನಿಸಿತು. ಆದರೆ ರೈಲುಗೈಡು, ಅತಿ ಸಮೀಪ ಎಂದರೆ ಬರುವ ನಿಲ್ದಾಣವೇ ನರಕವೆಂದು ತೋರಿಸುತ್ತಿತ್ತು. ಅಷ್ಟರಲ್ಲಿ ನಿಲ್ದಾಣ ಬಂದೇ ಬಿಟ್ಟಿತು. ಫಲಕ ನೋಡಿದರೆ 'ನರಕ' ವೆಂದೇ ಇತ್ತು. ಪಾದ್ರಿಗಳು ಅನುಮಾನದಿಂದ ರೈಲುಗಾಡಿ ಇಳಿದು ನೋಡುತ್ತಾರೆ. ಅವರಿಗೆ ಇನ್ನೂ ಆಶ್ಚರ್ಯ ಕಾದಿತ್ತು. ಸ್ಟೇಶನ್ ದಲ್ಲಿಯೂ, ಹೊರಗಡೆ ಎಲ್ಲಿಯೂ ಅವ್ಯವಸ್ಥೆ, ಅಸಹ್ಯತೆಯ, ನರಕದ ವಾತಾವರಣ ಸುಳಿವೇ ಇಲ್ಲ.

ಎಲ್ಲವೂ, ಶಾಂತ ಸುಂದರ ವ್ಯವಸ್ಥೆಯ ಪರಿಸರ. ಸುತ್ತಲಿನ ಭೂಪ್ರದೇಶದಲ್ಲಿ ಒಳ್ಳೆಯ ಫಲವತ್ತಾದ ಕೈಬೀಸಿ ಕರೆವಂಥ ಸಾಲು ಮರಗಳ ನೋಟ ಆಹ್ಲಾದಕರವಾಗಿತ್ತು. ಪಾದ್ರಿಗಳು ಅನುಭವವು ತಾನೆಲ್ಲಿಯೂ ತಪ್ಪಿಸಿಕೊಂಡಂತೆ, ಮನದಲ್ಲಿ ದಿಗ್ಭ್ರಮೆ.

ಹಾಗೆಯೇ ಹೆಜ್ಜೆ ಹಾಕುತ್ತ, ಪ್ಲಾಟ್‌ಪಾರ್ಮ್ ಮೇಲೆ ಮುಂದೆ ನಡೆದರು. ಜನವಿರಳ ಇವರು ಅತ್ತಿತ್ತ ನೋಡುತ್ತ ಹೋಗುವುದನ್ನು ಕಂಡು ಅಲ್ಲಿರುವ ಸ್ಟೇಶನ್ ಮಾಸ್ಟರರು 'ನಮಸ್ಕಾರ ಸ್ವಾಮಿ ತಮಗೆ ಏನಾದರೂ ತಿಳಿಯಬೇಕಿತ್ತೇ? ತಾವು ಬಂದದ್ದೆಲ್ಲಿಂದ ?' ಎಂದು ಮಾತನಾಡಿಸಿದರು.

ಅದಕ್ಕುತ್ತರವಾಗಿ 'ಅಹುದು, ನನಗೆ ಇಂಥಹ ಹೆಸರಿನ ವಿಜ್ಞಾನಿಗಳಿಗೆ ಭೆಟ್ಟಿಯಾಗಬೇಕಿತ್ತು. ಆದರೆ, ಸ್ವಾಮಿ, ನನಗೆ ಮೊದಲು ಹೇಳಿ ಇದು ನಿಜವಾದ ನರಕದ ನಿಲ್ದಾಣವೇ ಹೇಗೆ? ಎಂದುಸುರಿದರು ಪಾದ್ರಿಗಳು.

ಸ್ಟೇಶನ್ ಮಾಸ್ಟರರು ನಸುನಗುತ್ತ 'ಗುರುಗಳೇ ಅನುಮಾನವೇ ಬೇಡ, ನೀವಿರುವುದು, ಮುಟ್ಟಬೇಕಾಗಿದ್ದ ನಿಲ್ದಾಣದಲ್ಲೇ ಅಲ್ಲಿ ನೋಡಿ, ದೂರದಲ್ಲಿ ಒಂದು ಚಿಕ್ಕ ಸುಂದರ ಮನೆಯಿದೆ. ಅದೇ ನೋಡಿ ನೀವು ಭೇಟಿ ಮಾಡಬೇಕಿರುವ ವಿಜ್ಞಾನಿಯ ನಿವಾಸ' ಎಂದು ಅದರೆಡೆಗೆ ಕೈಮಾಡಿ ತೋರಿಸಿದರು.

ಪಾದ್ರಿಗಳು ನಿಲ್ದಾಣದಿಂದ ಹೊರಬಂದು ಆ ಮನೆ ಇರುವಡೆಗೆ ನಡೆದರು. ದಾರಿಗುಂಟ ಅವರ ಅನುಮಾನ, ಗೊಂದಲ, ಆಶ್ಚರ್ಯಗಳು ಇನ್ನೂ ಉಲ್ಬಣಿಸಿದವು. ಕಾರಣ ಅವರು ಸಾಗುತ್ತಿದ್ದದ್ದು, ಪ್ರಶಾಂತ, ಸುಂದರ, ಸ್ವಚ್ಛ, ಆಕರ್ಷಕ ಹೂದೋಟಗಳು ಮಾರ್ಗದಲ್ಲಿ, ಇದು ಅವರು ತಿಳಿದುಕೊಂಡು ನಿರೀಕ್ಷಿಸುತ್ತಿರುವ ಚಿತ್ರಕ್ಕೆ ತದ್ವಿರುದ್ಧ.

ಚಿಕ್ಕ ಅಚ್ಚುಕಟ್ಟಾದ ಮನೆಯ ಆವರಣದ ಹೂದೋಟದಲ್ಲಿದ್ದ ವಿಜ್ಞಾನಿಯನ್ನು ಸಂಧಿಸಿ ಅವರನ್ನು ಕೇಳಿದರು. 'ಸ್ವಾಮೀ, ತಾವು ಇಂಥ ಹೆಸರಿನ ವಿಜ್ಞಾನಿಗಳೇ ಹೇಗೆ? ಎರಡನೆಯದು, ಇದು ನರಕವೇ ಹೌದೇನು? ಅಥವಾ ಬೇರಾವುದೋ ಪ್ರದೇಶವೋ? ಗೊತ್ತಾಗುತ್ತಿಲ್ಲ ಹೇಳಿ' ಎಂದಿದಕ್ಕೆ ವಿಜ್ಞಾನಿಯು ಶಾಂತಚಿತ್ತದಿಂದ ಪಾದ್ರಿಗಳನ್ನು ಸ್ವಾಗತಿಸಿ, ಅವರಿಗೆ ಆಸನವನ್ನು ತೋರಿಸಿ ಅಂದದ್ದು, 'ಗುರುಗಳೇ ತಾವು ಗೊಂದಲದಲ್ಲಿರುವಂತೆ ಕಾಣುತ್ತಿದೆ. ಸಾವರಿಸಿಕೊಳ್ಳಿ, ಗಾಬರಿಯಾಗುವಂಥದ್ದೇನೋ ಇಲ್ಲ. ಇದು ನರಕವೇ ಹೌದು. ತಾವು ಬಂದ ಘನಕಾರ್ಯವನ್ನು ತಿಳಿಸಿದರೆ, ಮುಂದೆಲ್ಲವೂ ಸರಳವಾಗುತ್ತದೆ. ಆಗ ಪಾದ್ರಿಗಳು ಸುಧಾರಿಸಿಕೊಂಡು, ತಾವು ಬಂದು ತಮ್ಮ ತಪ್ಪೊಪ್ಪಿಗೆ ವಿಧಾನವನ್ನು ಪೂರೈಸಬೇಕಿತ್ತು. ತುರ್ತು ಕಾರಣಗಳಿಂದ ಸಕಾಲದಲ್ಲಿ ನಾನು ತಮ್ಮನ್ನು ಭೇಟಿಯಾಗುವದಾಗಲಿಲ್ಲ. ತಪ್ಪೊಪ್ಪಿಗೆಯಿಲ್ಲದೆ ಮರಣವಾದ ಕಾರಣ, ಸ್ವರ್ಗ ಪ್ರಾಪ್ತಿಯಿಲ್ಲವೆಂದು ನೊಂದುಕೊಂಡು ಈ ನರಕಕ್ಕೆ ಬಂದು ತಡವಾದರೂ ಆ ವಿಧಿಯನ್ನು ಪೂರೈಸಿ, ತಮ್ಮನ್ನು ಸ್ವರ್ಗಕ್ಕೆ ಕಳಿಸಬೇಕು ಎಂದಿದ್ದೇನೆ. ಆದರೆ ನಾನು ಇಲ್ಲಿ ಕಾಣುವುದೇನು? ನಾನು ತಿಳಿದುಕೊಂಡ ನರಕದ ಲಕ್ಷಣ ಗಳಂತೂ ಇಲ್ಲಿ ಇಲ್ಲವೇ ಇಲ್ಲ. ಇಲ್ಲಿರುವುದೆಲ್ಲ ಸ್ವರ್ಗಕ್ಕೆ ಏನು ಕಡಿಮೆ ಇದೆ? ಎಂದು ವಿಶ್ರಮಿಸಿದರು. ವಿಜ್ಞಾನಿಯು ಸಮಾಧಾನದಿಂದ ತಮ್ಮ ಕತೆಯನ್ನು ಹೇಳತೊಡಗಿದರು. ಮರಣಾನಂತರ ನಾನಿಲ್ಲಿ ಬಂದಾಗ ತಾವು ಕೇಳಿ ಓದಿ ತಿಳಿದು

ಕೊಂಡಿದ್ದ ಪರಿಸ್ಥಿತಿಯೇ ಇತ್ತು. ಆದರೆ ನಾನು ಬಂದಿಳಿದ ಮೇಲೆ ಇದೇ ನನ್ನ ಖಾಯಂ ನಿವಾಸವಾಗಬೇಕಾಗಿರುವುದರಿಂದ, ನಮ್ಮ ನಿವೇಶನವು ವಾಸ ಯೋಗ್ಯವಾಗಬೇಕೆಂಬ ಉದ್ದೇಶದಿಂದ ವಿಚಾರಮಾಡಿ ಯೋಚಿಸತೊಡಗಿದೆನು. ಎಲ್ಲಕ್ಕೂ ಮೊದಲು ನೆಲದ ಮೇಲಿನ ಸ್ವಚ್ಛತೆಗೆ ಆದ್ಯತೆ ಕೊಟ್ಟು ಈ ಪ್ರದೇಶದಲ್ಲಿಯ ಎಲ್ಲಕ್ಕೂ ಹೆಚ್ಚು ತಗ್ಗಾದ ಸ್ಥಾನವನ್ನು ಗುರುತಿಸಿ, ಅಲ್ಲಿ ಒಂದು ಹೊಂಡ ಕಟ್ಟಿ ಸುತ್ತಲಿನ ಪ್ರದೇಶದಲ್ಲಿಯ ಅತೀ ಎತ್ತರದ ಸ್ಥಾನದಿಂದ ಹೊಂಡದವರೆಗೆ ಚರಂಡಿಗಳನ್ನು ರೂಪಿಸಬೇಕಾಗಿತ್ತು. ಆದರೆ ಈ ಎಲ್ಲ ಪ್ರದೇಶಕ್ಕೆ ಒಂದು ಮಹಾ ಯೋಜನೆಯನ್ನು ಮಾಡಬೇಕಿತ್ತು. ಅಲ್ಲಿ ಜನರಿಗೆ, ಕೃಷಿ ಭೂಮಿಗೆ, ದನಕರುಗಳಿಗೆ ಹೈನದ ಸಲುವಾಗಿ ಸ್ಥಾನ, ಜನರ ನಿವೇಶನಗಳು, ಆಟದ ಮೈದಾನ, ಶಾಲೆ, ಆಸ್ಪತ್ರೆಗಳನ್ನೆಲ್ಲ ಅಳವಡಿಸಬೇಕಿತ್ತು. ಮಾಸ್ಟರ್ ಪ್ಲಾನ್ ತಯಾರಿಸಿದ ಮೇಲೆ, ಹೊಳೆ, ಹಳ್ಳಗಳಿಗೆ ಎತ್ತರದ ಪ್ರದೇಶದಲ್ಲಿ ಅಣೆಕಟ್ಟುಗಳನ್ನು ನಿರ್ಮಿಸಿ, ಅಲ್ಲಿಂದ ಕಾಲುವೆಗಳ ಮುಖಾಂತರ ಹೊಲಗಳಿಗೆ ವಸತಿಗಳಿಗೆ ನೀರಿನ ಪೂರೈಕೆಯನ್ನು ಮೊದಲು ಪ್ರಾರಂಭಿಸಲಾಯಿತು. ನಿಧಾನವಾಗಿ ಮನೆಗಳ ನಿರ್ಮಾಣ ಇತ್ಯಾದಿ ಕೈಗೊಂಡು, ಮಾನವ ಹಾಗೂ ಪ್ರಾಣಿ(ದನಕರು)ಗಳು ಮಧ್ಯೆ ಪರಸ್ಪರ ಪೂರಕ ಸಹಕಾರದಿಂದ ಇಲ್ಲಿದ್ದೇವೆ. ನಮ್ಮ ಕಾಯಕವನ್ನು ಶ್ರದ್ಧೆಯಿಂದ ಮಾಡುತ್ತಿದ್ದೇವೆ. ಎಲ್ಲರಿಗೂ ಲೇಸನೇ ಬಯಸುತ್ತಿದ್ದೇವೆ. ಸತ್ಯವನ್ನೇ ನುಡಿಯುತ್ತ ಸದಾಚಾರದಲ್ಲಿ ನಡೆಯುತ್ತ ಇದ್ದೇವೆ. ಅಷ್ಟರಲ್ಲಿ ತಾವು ಬಂದಿರಿ. ನಾನು ಇಲ್ಲಿ ಬರುವುದಕ್ಕಿಂತ ಮೊದಲು ನೀವು ತಿಳಿದಂತೆ ಇದ್ದಿತು. ಈಗ ಈ ಎಲ್ಲ ಯೋಜನೆ, ಪ್ರಯತ್ನಗಳ ನಂತರ ತಾವು ಈಗಿರುವುದನ್ನು ನೋಡುತ್ತಿದ್ದೀರಿ. ಇನ್ನು ತಪ್ಪೊಪ್ಪಿಗೆಯ ವಿಚಾರ ಅದಕ್ಕೇನಂತೆ; ಅದನ್ನು ನಿರಾತಂಕ ವಾಗಿ ಏರ್ಪಡಿಸಬಹುದು. ನನಗೆ ತೆರೆದ ಮನಸ್ಸಿದೆ.

ಇದನ್ನೆಲ್ಲ ಕೇಳಿದ ಪಾದ್ರಿಗಳು ತಾವೇ ಉದ್ಗರಿಸಿದರಂತೆ 'ನರಕವಿದ್ದದ್ದನ್ನು ತಾವು ಬಂದು ಸ್ವರ್ಗವನ್ನಾಗಿ ಪರಿವರ್ತಿಸಿದ್ದೀರಿ, ತಮ್ಮಂಥವರಿಗೆ ಈ ಎಲ್ಲ ಸಂಪ್ರದಾಯದ ವಿಧಿ ವಿಧಾನಗಳ ಅವಶ್ಯಕತೆ ಇದೆಯೇ?' ಎಂದರು.

ಇದೆಲ್ಲ ಕಾಲ್ಪನಿಕ ಕತೆಯಾದರೂ ಅದರಲ್ಲಿ ಅಡಗಿದ ನಿರ್ದೇಶಕ ತತ್ವ-ಸ್ವರ್ಗ ಇಲ್ಲವೆ ನರಕಗಳು ಮಾನವನು ತಾನೇ ನಿರ್ಮಿಸಬಹುದಾದ ಪರಿಸರಗಳು, ಲೌಕಿಕ ಸ್ಥಾವರವೇ ಇರಲಿ ಅಥವಾ ಮಾನಸಿಕ ವಾತಾವರಣವೇ ಇರಲಿ. ಮಾನವನ ನಡೆ, ನುಡಿ, ಕಾರ್ಯಗಳು ಸ್ವರ್ಗವನ್ನು ನರಕವನ್ನಾಗಿ ಇಲ್ಲವೆ ಇದ್ದ ನರಕವನ್ನು ಸ್ವರ್ಗವನ್ನಾಗಿ ಪರಿವರ್ತಿಸುತ್ತವೆ ಎಂಬುದು ಈ ಕತೆಯ ಸಾರಾಂಶ. ಇದು ಅಣ್ಣನವರ ವಚನದಲ್ಲಿ ಹೇಳಿದ ತತ್ವವೇ ಆಗಿದೆ. *

## ವಿಶ್ವಗುರು ಬಸವಣ್ಣನವರು

ಶಿವ, ಗುರುವೆಂದು ಬಲ್ಲಾತನೆ ಗುರು
ಶಿವ, ಲಿಂಗವೆಂದು ಬಲ್ಲಾತನೆ ಗುರು
ಶಿವ, ಜಂಗಮವೆಂದು ಬಲ್ಲಾತನೆ ಗುರು
ಶಿವ, ಪ್ರಸಾದವೆಂದು ಬಲ್ಲಾತನೆ ಗುರು
ಶಿವ, ಆಚಾರವೆಂದು ಬಲ್ಲಾತನೆ ಗುರು
ಇಂತೀ ಪಂಚವಿಧವೇ ಪಂಚಬ್ರಹ್ಮವೆಂದರಿದ
ಮಹಾಮಹಿಮ ಸಂಗನ ಬಸವಣ್ಣನು
ಎನಗೆಯೂ ಗುರು, ನಿನಗೆಯೂ ಗುರು
ಜಗವೆಲ್ಲಕ್ಕೆಯೂ ಗುರುಕಾಣಾ, ಗುಹೇಶ್ವರಾ

– ಶರಣ ಅಲ್ಲಮಪ್ರಭುದೇವರು

೧೨ನೆಯ ಶತಮಾನದಲ್ಲಿ ಬಸವಣ್ಣನವರು ಸ್ಥಾಪಿಸಿದ ಅನುಭವ ಮಂಟಪದ ಶೂನ್ಯಸಿಂಹಾಸನಾಧ್ಯಕ್ಷರಾಗಿದ್ದ ಅಲ್ಲಮಪ್ರಭುದೇವರು, ಈ ವಚನದ ಮೂಲಕ ಮಹಾಮಹಿಮ, ಲಿಂಗಾಯಿತ ಧರ್ಮ ಸ್ಥಾಪಕ ಸಂಗನ ಬಸವಣ್ಣನವರು ಜಗವೆಲ್ಲಕ್ಕೆಯೂ ಗುರು ಅಂದರೆ ವಿಶ್ವಗುರುವಾಗಿದ್ದಾರೆ ಎಂದು ಸಾರಿದ್ದಾರೆ.

ನಿರಾಕಾರ ಪರಶಿವನ ಸಾಕಾರ ಸ್ವರೂಪಗಳಾದ ಗುರು, ಲಿಂಗ, ಜಂಗಮ, ಪ್ರಸಾದ, ಆಚಾರಗಳು, ಇವೇ ಪಂಚಬ್ರಹ್ಮವೆಂಬುದನ್ನು ಸ್ವಾನುಭಾವದಿಂದ ಪ್ರಥಮತಃ ಅರಿದ ಮಹಾಮಹಿಮನು ಸಂಗನ ಬಸವಣ್ಣನು. ಆದ್ದರಿಂದ ಈ ವಿಶ್ವದಲ್ಲಿರುವ ಎಲ್ಲ ಜಗತ್ತುಗಳಿಗೆಲ್ಲ ಮತ್ತು ತಮಗೂ ಹಾಗೂ ದೇವನಿಗೂ ಕೂಡ ಬಸವಣ್ಣನವರೇ ಗುರು ಎಂದು ಅರುಹಿದ್ದಾರೆ.

**ಗುರುಲಿಂಗ ಜಂಗಮಕ್ಕೆ ಆಧಾರ ಬಸವಣ್ಣ**
**ಪಾದೊದಕ ಪ್ರಸಾದಕ್ಕೆ ಆಧಾರ ಬಸವಣ್ಣ**
**ಸರ್ವಾಪತ್ತಿಗಾಧಾರ ಬಸವಣ್ಣ**
**(ಸ್ವರ್ಗ) ಮರ್ತ್ಯ ಪಾತಾಳಕ್ಕೆ ಬಸವಣ್ಣನ ಚೈತನ್ಯವಲ್ಲದಿಲ್ಲ**
**ಆ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ**
**ಎನುತಿರ್ದಾತನಂಬಿಗ ಚೌಡಯ್ಯ**

– ಅಂಬಿಗರ ಚೌಡಯ್ಯ





## ಅರಿವು–ಆಚಾರ

– ಬಿ. ಮಹದೇವಪ್ಪ, ಸಂಪಾದಕರು, 'ಅರಿವು ಆಚಾರ' ಮಾಸಪತ್ರಿಕೆ, ನಂ.6 ಕೈಗಾರಿಕಾ ಪ್ರಾಂಘಣ, ಗುಲ್ಬರ್ಗಾ.

*ಮರ್ತ್ಯಲೋಕದ ಭಕ್ತರ ಮನವಬೆಳಗಲೆಂದು*
*ಇಳಿತಂದನಯ್ಯ ಶಿವನು, ಕತ್ತಲೆಯ ಪಾಳೆಯವ*
*ರವಿಹೊಕ್ಕಂತಾಯಿತಯ್ಯ, ಚಿತ್ತದ ಪ್ರವೃತ್ತಿಯ ಹಿಂಗಿಸಿ,*
*ಮುಕ್ತಿ ಪಥವ ತೋರಿದನಲ್ಲಾ ಅಸಂಖ್ಯಾತರುಗಳಿಗೆ.*
*ತನುವೆಲ್ಲ ಸ್ವಯಲಿಂಗ, ಮನವೆಲ್ಲ ಚರಲಿಂಗ, ಭಾವವೆಲ್ಲ*
*ಮಹಾಲಿಂಗ ಘನದ ಬೆಳಗು ಚೆನ್ನಮಲ್ಲಿಕಾರ್ಜುನಯ್ಯ,*
*ನಿಮ್ಮ ಶರಣ ಸಮ್ಯಗ್ ಜ್ಞಾನಿ ಚೆನ್ನಬಸವಣ್ಣನ*
*ಶ್ರೀಪಾದಕ್ಕೆ ಶರಣೆಂದು ಎನ್ನಭವಂ ನಾಸ್ತಿಯಾಯಿತ್ತಯ್ಯಾ!*

– ಮಹಾದೇವಿಯಕ್ಕನವರು

ಮಹಾನುಭಾವ ಬಸವಣ್ಣನವರ ಸೋದರಳಿಯ, ಶರಣೆ ಅಕ್ಕನಾಗಮ್ಮ– ಶರಣ ಶಿವದೇವಯ್ಯನವರ ಏಕಮಾತ್ರ ಪುತ್ರ ಚೆನ್ನಬಸವಣ್ಣನವರು ಜ್ಞಾನದ ಗಣಿಯಾಗಿದ್ದರು, ಬೆಳಕಿನ ಪುಂಜವಾಗಿದ್ದರು, ಅರಿವಿನ ಆಗರವಾಗಿದ್ದರು, ಪಾಂಡಿತ್ಯದ ಮೇರುವಾಗಿದ್ದರು. ಅದಕ್ಕಾಗಿಯೇ 'ಪ್ರಭುಲಿಂಗಲೀಲೆ' ಕಾವ್ಯದ ಕರ್ತೃ ಚಾಮರಸಕವಿಗಳು 'ವೀರಶೈವಾಚಾರ ಮಾರ್ಗ ವಿಚಾರ ವಭ್ಯಂತರ ಸೋಳೀಪರಿ ಚರಣಿಸಿ ಹರಕರ್ಮ ಭಕ್ತಿ ಜ್ಞಾನ ವಿಹುದೆಂದು, ಧಾರುಣಿಯಲರಿವಂತೆ ಕರುಣಾಕಾರನಾಗಿ ಷಡುಸ್ಥಲವನುದ್ಧಾರಿಸಿದ ಗುರು ಚೆನ್ನಸಂಗನ ಬಸವ ಶರಣಾರ್ಥಿ' ಎಂದು ತನ್ನ ಅನುಪಮವಾದ ಶ್ರದ್ಧಾಂಜಲಿಯನ್ನು ಸಲ್ಲಿಸಿದ್ದಾನೆ.

ನಿಜವಾಗಿಯೂ ವೀರಶೈವ ವಿಚಾರಧಾರೆಯನ್ನು ಆಚಾರ ವಿಧಿ-ವಿಧಾನಗಳನ್ನು ಓರಣಿಸಿ ಒಂದು ಧರ್ಮದ ಚೌಕಟ್ಟಿಗೆ ಅಳವಡಿಸಿದವರು ಮಹಾಜ್ಞಾನಿ ಚೆನ್ನಬಸವಣ್ಣನವರು. ಷಟ್‌ಸ್ಥಲ ಬ್ರಹ್ಮಿ, ಷಟ್‌ಸ್ಥಲ ಪ್ರಭಾಕರ ಎಂಬ ಅಭಿದಾನಗಳು ಅವರಿಗೆ ಮಾತ್ರ ಸಲ್ಲುತ್ತವೆ. ಇಷ್ಟು ಪಾಂಡಿತ್ಯವನ್ನು ಅವರು ಚಿಕ್ಕ ವಯಸ್ಸಿನಲ್ಲಿಯೇ ಹೇಗೆ ಸಂಪಾದಿಸಿದರು ಎಂಬ ವಿಷಯ ಈಗಲೂ ಕುತೂಹಲಕಾರಿಯಾಗಿಯೇ ಉಳಿದಿದೆ. ಇಂಥ ಅತ್ಯಗಾಧ, ಅತ್ಯದ್ಭುತ, ಜ್ಞಾನ ಸಾಮರ್ಥ್ಯದ ಬಗ್ಗೆ ಸ್ವತಃ ಸೋದರಮಾವ ಬಸವಣ್ಣನವರೇ ಅತ್ಯಾಶ್ಚರ್ಯ ಪಡಬೇಕಾದರೆ ಮಿಕ್ಕವರ ಪಾಡೇನು? ಬಸವಣ್ಣನವರದೇ ಒಂದು ವಿಸ್ಮಯ ಕಾರಿ ಬದುಕು. ವಿಸ್ಮಯಕಾರಿ ವ್ಯಕ್ತಿಯೇ ವಿಸ್ಮಯಪಡಬೇಕಾದರೆ ಚೆನ್ನಬಸವಣ್ಣ ನವರು ಅದೆಂಥ ಜನಕ ವ್ಯಕ್ತಿಯಾಗಿರಬಹುದು? ಒಂದು ವಚನದಲ್ಲಿ ಬಸವಣ್ಣ ನವರು ಹೀಗೆ ಉದ್ಗರಿಸಿದ್ದಾರೆ. *'ಬಿತ್ತದೆ ಬೆಳೆಯದೆ ಬೆಳೆದ ಹೆಬ್ಬೆಳಸಿನ ರಾಶಿಯ ನೋಡಾ! ಸುಗಂಧ ಬಂಧ ಬಂಧುರ ದಂತೆ ಹುಟ್ಟುತ್ತಲೇ ಪರಿಮಳ! ಆದಿ ಅನಾದಿಯಿಲ್ಲದೆ ಮುನ್ನವೇ ತನ್ನಿಂದಲೇ ತಾನಾಗಿರ್ದ ಕಾರಣ, ಮುಟ್ಟದೆ ತಟ್ಟದೆ, ಗುರುಕಾರುಣ್ಯವ ಪಡೆದು ಲಿಂಗಸ್ವವಾಗಿ ಎನಗೆ ಗತಿಪಥವ ತೋರಿಸಬೇಕೆಂದು ಆಗಾದನು ಕೂಡಲಸಂಗಮದೇವ ರಲ್ಲಿ ಬಸವಣ್ಣನು.*

ಬಸವಣ್ಣನವರ ವಚನದ ತಾತ್ಪರ್ಯವಿಷ್ಟೆ, ಸ್ವಯಂಭು ಚೆನ್ನಬಸವಣ್ಣ ಸ್ವಯಂ ಶರಣನಾಗಿ ಜನಿಸಿದ್ದಾನೆ. ಬುದ್ಧಿ, ಬೋಧನೆಯಿಲ್ಲ, ಸಿದ್ಧಿ ಸಾಧನೆಯಿಲ್ಲ, ಹುಟ್ಟುತ್ತಲೇ ಮಹಾಜ್ಞಾನಿ ಆತ. ಸುಗಂಧವಾಸನೆಯನ್ನು ನೀಡುವ ಮರುಗ, ದವನ, ತುಳಸಿ ಮೊದಲಾದ ಸುಗಂಧ ಸಸಿಗಳಿಗೆ ಬೆಳೆದ ಮೇಲೆ ರೆಂಬೆ ಕೊಂಬೆಗಳು ಬಿಟ್ಟ ಮೇಲೆ ಅವುಗಳಿಂದ ಸುವಾಸನೆ ಬರುತ್ತವೆಯೆಂಬುದೇನೂ ಇಲ್ಲ. ಮೊಳಕೆ ಯೊಡೆದು ಎರಡೆಲೆ ಬಿಟ್ಟಾಗಲೇ ಆ ಸುಗಂಧ ವಾಸನೆ ಇರುತ್ತದೆ. ಅಂತಹ ಹುಟ್ಟು ಜ್ಞಾನ ಗುರು ಚೆನ್ನಬಸವಣ್ಣ. ಅವನು ಅನೇಕರಿಗೆ ಗುರುವಾಗಿದ್ದಾನೆ ಹೊರತು ಆತನ ಜ್ಞಾನ ಗುರು ಯಾರೆಂಬುದು ಇಂದಿಗೂ ತಿಳಿದು ಬಂದಿಲ್ಲ. ನಿಸರ್ಗದಲ್ಲಿ ವಿಸ್ಮಯ ಇರಬೇಕಾದರೆ ಆ ಸೃಷ್ಟಿಕರ್ತ ಹುಟ್ಟಿಸಿದ ಮನುಷ್ಯ ಲೋಕದಲ್ಲಿಯೂ ವಿಸ್ಮಯ ಏಕಿರಬಾರದು? ಮುಟ್ಟದೆ, ತಟ್ಟದೆ ಎಂದರೆ ಹಸ್ತಮಸ್ತಕ ಸಂಯೋಗವಿಲ್ಲದೆ ಕಿವಿಯಲ್ಲಿ ಮಂತ್ರೋಪದೇಶವಿಲ್ಲದೆ, ಅನುಗ್ರಹ ಆಶೀರ್ವಾದ ವಿಲ್ಲದೆ ಸಹಜ ಗುರುಕಾರುಣ್ಯವ ಪಡೆದಾತ ಮಹಾನುಭಾವ ಚೆನ್ನಬಸವಣ್ಣ. ವಿನಯ ಪರನಾಗಿಯೋ, ಬಸವಣ್ಣನವರ ಮಹಾವ್ಯಕ್ತಿತ್ವಕ್ಕೆ ಮಾರುಹೋಗಿಯೋ ಅನೇಕ ಕಡೆ ಬಸವಣ್ಣ ನವರೇ ತಮ್ಮ ಆದ್ಯ ಗುರುಗಳೆಂದು ಚೆನ್ನಬಸವಣ್ಣನವರು ಹೇಳಿಕೊಂಡಿರುವುದಾದರೂ ಮೇಲೆ ಉದ್ಗರಿಸಿದ ವಚನ ದಲ್ಲಿಯೇ ಬಸವಣ್ಣನವರು 'ಎನಗೆ ಗತಿ ಪಥವ ತೋರಿಸ ಬೇಕೆಂದು ಅಗಾಧನು' ಎಂದು ಹೇಳಿಕೊಳ್ಳಬೇಕಾದರೆ ಯಾರಿಗೆ ಯಾರು ಗುರು ಎಂದು ಸಂಭಾವಿಸಿಕೊಳ್ಳಬೇಕು? ಅಂತೆಯೇ ಬಸವಣ್ಣನವರ ಆಪ್ತಕಾರ್ಯದರ್ಶಿಯಾಗಿದ್ದ ಮಹಾನ್ ಶರಣ ಹಡಪದ ಅಪ್ಪಣ್ಣನವರು ತಮ್ಮ ವಚನಾಂಕಿತವಾಗಿ 'ಬಸವಪ್ರಿಯ ಕೂಡಲಚೆನ್ನಬಸವಣ್ಣ' ಎಂದು ಇಟ್ಟುಕೊಂಡಿದ್ದಾನೆ.

ಪ್ರಸ್ತುತ ವಚನದಲ್ಲಿ ವೈರಾಗ್ಯ ನಿಧಿ ಮಹಾದೇವಿಯಕ್ಕನವರು ಚೆನ್ನಬಸವಣ್ಣನವರ ಜ್ಞಾನಪ್ರಕಾಶದ ಬಗ್ಗೆ ಅತ್ಯದ್ಭುತವಾದ ಕಲ್ಪನೆಯನ್ನು ನೀಡಿದ್ದಾರೆ. ಹೃದಯ ತುಂಬಿ ಬಂದ ಮಾತುಗಳು. ಹಿಂದುಗಡೆ ಹೇಳಿದವುಗಳಲ್ಲ, ಸತ್ತ ಎಮ್ಮೆಯಿಂದ ಸವ್ವಾಸೇರು ತುಪ್ಪ ಎಂಬಂತೆ ಚೆನ್ನಬಸವಣ್ಣನವರು ಸತ್ತ ಬಳಿಕ ಹೇಳಿದ ಮಾತುಗಳಲ್ಲ. ನಾವು ಈಗಿನ ಲೌಕಿಕರು ಶರಣರು ಇದ್ದಾಗ ರಕ್ಷಿಸಿ ಸತ್ತ ಬಳಿಕ ಅವರನ್ನು

ಆಕಾಶಕ್ಕೆ ಏರಿಸಿ ನುಡಿಯುತ್ತೇವೆ ಮತ್ತು ನಡೆಯುತ್ತೇವೆ, ಆದರೆ ಅಕ್ಕ ಮಹಾದೇವಿಯವರು ಈ ವಚನವನ್ನು ಅನುಭವ ಮಂಟಪದಲ್ಲಿ ಚೆನ್ನ ಬಸವಣ್ಣನವರನ್ನು ಸಮಕ್ಷಮದಲ್ಲಿ ಕೂಡಿಸಿಕೊಂಡೇ ಶೂನ್ಯಸಿಂಹಾಸನಾಧೀಶ ಅಲ್ಲಮಪ್ರಭುಗಳನ್ನು ಸಾಕ್ಷಿಯಾಗಿಟ್ಟುಕೊಂಡು ಹೇಳಿದ್ದಾರೆ. ಮಹಾಜ್ಞಾನಿ ಚೆನ್ನಬಸವಣ್ಣನವರು ಹುಟ್ಟಿದಾಗ ಕತ್ತಲೆಯ ಪಾಳೆಯಕ್ಕೆ ಸೂರ್ಯ ಪ್ರವೇಶಿಸಿದಂತೆ ಆಯಿತಂತೆ. ಅಂದರೆ ಚೆನ್ನ ಬಸವಣ್ಣನವರು ಇದ್ದಲ್ಲಿ ಕತ್ತಲೆ ಇರುವುದು ಸಾಧ್ಯವೇ? ಮರ್ತ್ಯಲೋಕದ ಭಕ್ತರ ಮನದ ಕತ್ತಲೆಯ ಕಳೆಯಬೇಕೆಂದು ಕರುಣಾಳುವಾದ ಸ್ವತಃ ಶಿವನು ಚೆನ್ನಬಸವಣ್ಣನವರ ವೇಷದಲ್ಲಿ ಭೂಮಿಗೆ ಅವತರಿಸಿದನೆಂಬುದು ಶಿವಶರಣೆ ಅಕ್ಕಮಹಾದೇವಿಯವರ ನಂಬಿಕೆ. ಚೆನ್ನಬಸವಣ್ಣನವರ ಸದ್ಬೋಧೆಯಿಂದ ಎಲ್ಲರ ಮನದ ಚಿತ್ತ ಪ್ರವೃತ್ತಿಗಳು ಅಳಿದು ಆತನ ಸಂಸರ್ಗದಲ್ಲಿ ಬಂದವರೆಲ್ಲರೂ ಮುಕ್ತಿಯ ಮಾರ್ಗ ಹಿಡಿದರಂತೆ. ಏಕೆಂದರೆ ಚೆನ್ನಬಸವಣ್ಣನವರ ತನುವೇ ಲಿಂಗಸ್ವರೂಪ, ಮನವೇ ಜಂಗಮ ಸ್ವರೂಪ, ಭಾವವೆಲ್ಲ ಮಹಾಲಿಂಗ ಘನ ಸ್ವರೂಪ. ದೇವರ ನಿಷ್ಪಕ್ಷಪಾತತನಕ್ಕೂ ಮಹಾಜ್ಞಾನಿ ಚೆನ್ನಬಸವಣ್ಣನವರ ನಿಷ್ಪಕ್ಷಪಾತತನಕ್ಕೂ ವ್ಯತ್ಯಾಸವಿರಲಿಲ್ಲ. ಅಂತಹ ಶರಣರ ಪಾದಗಳಿಗೆ ನಮೋ ನಮಃ ಎಂದವ ಜೀವನ ಪಾವನ, ಜನ್ಮ ಸಾರ್ಥಕ.

ಶಿವಶರಣೆ ಮಹಾದೇವಿಯಕ್ಕನವರ ಅಭಿಪ್ರಾಯದಿಂದ ಪ್ರೋತ್ಸಾಹಿತರಾದರೆಂಬಂತೆ ಶೂನ್ಯ ಪೀಠಾಧ್ಯಕ್ಷರಾಗಿ ಶ್ರೀಮದ್ ಅಲ್ಲಮಪ್ರಭುಗಳೂ ಮನದುಂಬಿ ಭಾವದುಂಬಿ ಹಿಗ್ಗಿ ಚೆನ್ನಬಸವಣ್ಣನವರ ಬಗ್ಗೆ ಹೀಗೆ ಹೇಳುತ್ತಾರೆ. 'ಕಿರಿಯರಾದಡೇನು? ಹಿರಿಯರಾದಡೇನು? ಮರಹಿಂಗೆ ಹಿರಿದು ಕಿರಿದುಂಟಲ್ಲದೆ ಅರುಹಿಂಗೆ ಹಿರಿದು ಕಿರಿದುಂಟೇ? ಆದಿ ಅನಾದಿ ಇಲ್ಲದಂದು, ಅಜಾಂಡ ಬ್ರಹ್ಮಾಂಡ ಕೋಟಿಗಳು ದಯವಾಗದಂದು ಗುಹೇಶ್ವರಲಿಂಗದಲ್ಲಿ ನೀನೊಬ್ಬನೆ ಮಹಾಜ್ಞಾನಿಯೆಂಬುದು ಕಾಣಬಂದಿತ್ತು ನೋಡಾ ಚೆನ್ನಬಸವಣ್ಣ' ಎಂದು ಚೆನ್ನಬಸವಣ್ಣನವರಿಗೇನೆ ಹೇಳಿದ್ದಾರೆ. ವ್ಯಕ್ತಿಯ ಗುಣಾವಗುಣಗಳನ್ನು ಎದುರಿಗೆ ಹೇಳುವ ಹೃದಯ ವೈಶಾಲ್ಯ ಇಂದು ಎಲ್ಲಿದೆ?

ಅಲ್ಲಮ ಪ್ರಭುಗಳ ಅಭಿಪ್ರಾಯದ ಪ್ರಕಾರ ಮರಹು ಸಹಜವಾಗಿ ಅರವತ್ತು ವರ್ಷ ಆದ ಕೂಡಲೇ ತಾನಾಗಿ ಬರಬಹುದೇ ವಿನಹ, ಅರುಹು ಅಥವಾ ಜ್ಞಾನ ತಾನಾಗಿ ಬರುತ್ತದೆಯೆಂದ್ದು ಹೇಳಲಿಕ್ಕಾಗುವುದಿಲ್ಲ. ಜ್ಞಾನ ಆರಾಧಿಸಿದವರನ್ನು ಒಳಗೊಳ್ಳುತ್ತದೆ. ಅದಕ್ಕೆ ವಯಸ್ಸಿನ ಬೇಧವಿಲ್ಲ. ಲಿಂಗ-ಜಾತಿಗಳ ವ್ಯತ್ಯಾಸವಿಲ್ಲ. ಲೋಕವನ್ನೆಲ್ಲ ಸಂಚರಿಸಿದ ಶಾಸ್ತ್ರಾರ್ಥಗಳನ್ನೆಲ್ಲ ತಿರುವಿ ಹಾಕಿದ ಅಲ್ಲಮಪ್ರಭುಗಳು ಖಚಿತ ನಿಲುವಿನಿಂದ ಹೇಳುವುದೇನೆಂದರೆ ಜಗತ್ತು ಹುಟ್ಟಿದನಿಂದ ಮಾನವ ಜೀವಿ ಆವಿರ್ಭವಿಸಿದಂದಿನಿಂದ ಚೆನ್ನಬಸವಣ್ಣನವರಷ್ಟು ಅತ್ಯದ್ಭುತ ಜ್ಞಾನಿಗಳನ್ನು ತಮಗೆ ನೋಡದೊರೆತಿರುವುದಿಲ್ಲ ಎಂದಿದ್ದಾರೆ.

*

## 'ಸಿದ್ಧಗಂಗಾ' ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿಯಾಗಿ 'ಸಿದ್ಧಗಂಗಾ' ಮಾಸಪತ್ರಿಕೆ 42ನೇ ವರ್ಷದಲ್ಲಿ ಮುನ್ನಡೆಯುತ್ತಿದ್ದು ನಾಡಿನಾದ್ಯಾಂತ ಪ್ರಸಾರ ಹೊಂದಿದೆ. ದೀರ್ಘಕಾಲದ ಮುನ್ನಡೆಗೆ ಪೂಜ್ಯ ಶ್ರೀ ಶ್ರೀಗಳವರ ಸೇವೆ ತ್ಯಾಗ ಮತ್ತು ಉದಾರತೆಯಿಂದ ನೀವು ಆಜೀವ ಸದಸ್ಯತ್ವ ಪಡೆದಿರುವುದು ಆಧಾರ ಎಂದು ಭಾವಿಸಿದೆ.

'ಸಿದ್ಧಗಂಗಾ' ಮುನ್ನಡೆಗೆ ಆರ್ಥಿಕ ಪರಿಸ್ಥಿತಿ (ಹಣಕಾಸು) ಕುಂಠಿತವಾಗಿದೆ. ಇದಕ್ಕೆ ಕಾರಣ ಆಜೀವ ಮೊತ್ತದ ನಿಶ್ಚಿತ ಠೇವಣಿಯಲ್ಲಿ ಬ್ಯಾಂಕ್ ಬಡ್ಡಿದರ ಇಳಿತ, ಮತ್ತು ಪೇಪರ್ ಮುದ್ರಣ, ಅಂಚೆವೆಚ್ಚ ದುಬಾರಿಯಾಗಿರುವುದು. ಈ ಸಮಸ್ಯೆ ನಿಮ್ಮ ಗಮನಕ್ಕೆ ತರಲಾಗುತ್ತಿದೆ.

ಈ ಪರಿಣಾಮ ಆಜೀವ ಚಂದಾವನ್ನು 2004ನೇ ವರ್ಷದಲ್ಲಿ ಶ್ರೀಶ್ರೀಗಳವರ ಅನುಮತಿ ಮೇರೆಗೆ ಸಂಘ 1000/- ರೂ. ಗೆ ನಿರ್ಧರಿಸಿತು. ಈ ತೀರ್ಮಾನದಂತೆ 1000/- ರೂ.ಗೆ ಸರಿ ದೂಗಿಸುವಂತೆ ಹಿಂದೆ 500/- ರೂ., 600/-ರೂ ನೀಡಿ ಆಜೀವ ಸದಸ್ಯರಾಗಿದ್ದವರು ಬಾಕಿ 500/-ರೂ., 400/-ರೂ. ಸಂದಾಯ ಮಾಡುತ್ತಿದ್ದಾರೆ.

ಈ ಉಳಿಕೆ ಹಣ 500/-ರೂ., 400/ ರೂ ಸಂದಾಯ ಮಾಡದೇ ಇರುವ ಆಜೀವ ಸದಸ್ಯರುಗಳು ಈ ಬಗ್ಗೆ ದಯಮಾಡಿ ತೀವ್ರ ಗಮನ ಹರಿಸಬೇಕಾಗಿ ಕೋರುತ್ತೇವೆ. ತಮ್ಮ ವಿಳಾಸದಲ್ಲಿರುವ LM ನಂಬರ್ ಸೂಚಿಸಿ ಕ್ಯಾಷ್/ ಎಂ.ಒ. / ಚೆಕ್/ಡಿ.ಡಿ. ಮೂಲಕ 'ಸಿದ್ಧಗಂಗಾ' ಮಾಸಪತ್ರಿಕೆ ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಪತ್ರಿಕೆ ಚಿರಂಜೀವಿಯಾಗಿ ಮುನ್ನಡೆಯಲು ಹರಸಿ ಹಾರೈಸ ಬೇಕಾಗಿ ನಮ್ರ ವಿನಂತಿ.

**ಪ್ರಕಾಶಕರು**
ಸಿದ್ಧಗಂಗಾ ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.





## ಬಾಳ ಬೆಳಕು

-ತದ್ದಲಸೆ ವಿಘ್ನೇಶ್ವರ ಶರ್ಮ, ಹುಣ್ಸೇಕೊಪ್ಪ ಅಂಚೆ, ಶಿರಸಿ, ಉತ್ತರ ಕನ್ನಡ ಜಿಲ್ಲೆ.

ನಾವು ನಿತ್ಯವೂ ಕರ್ಮ ಮಾಡುತ್ತಲೇ ಇರಬೇಕು. ಈ ಕರ್ತವ್ಯ ಕರ್ಮ ಮಾಡುವುದು ನಮ್ಮ ಧರ್ಮ. ಅದರ ಫಲ ಕೊಡುವವನು ಭಗವಂತ. ಅದನ್ನು ಆತ ನೀಡಿದ ಪ್ರಸಾದವೆಂದೇ ಸ್ವೀಕರಿಸಬೇಕು. ಇದು ಈಶಾವಾಸ್ಯ ಉಪನಿಷತ್ತಿನ ಉಪದೇಶ.

ನಾವು ಇದು ನಮ್ಮದು, ನಮ್ಮ ಮನೆ ನಮ್ಮ ಸ್ವೊತ್ತು ನಾನು ದುಡಿದದ್ದು ಎನ್ನುತ್ತೇವೆ. ಆದರೆ ನಿಜಕ್ಕೂ ಅವೆಲ್ಲ ನಮ್ಮದಲ್ಲ. ಅದು ಭಗವಂತನದು. ಆತನಿಂದಲೇ ಬಂದದ್ದು. 'ಈಶಾವಾಸ್ಯಮಿದಂಸರ್ವಂ' ಅನ್ನುತ್ತದೆ. ಎಲ್ಲವೂ ಈಶ್ವರನ ಆಧೀನಕ್ಕೆ ಸೇರಿದ್ದು. ನಮ್ಮ ಮನೆಯಲ್ಲಿಯೇ ಮೂಲೆಯೊಂದರಲ್ಲಿ ಗುಬ್ಬಚ್ಚಿಯೊಂದು ಗೂಡುಕಟ್ಟಿ ವಾಸಿಸುತ್ತಿದೆ. ಅದರಲ್ಲಿಯೂ ಬೇರೊಂದು ಸಣ್ಣ ಹುಳು ತನ್ನ ಸಂಸಾರ ನಡೆಸುತ್ತದೆ. ಇವೆಲ್ಲ ತನ್ನ ಮನೆ ಅಂತಲೇ ತಿಳಿಯುತ್ತವೆ. ಹಾಗಾದರೆ ಇದೆಲ್ಲ ಯಾರ ಮನೆ?

ಈ ಸೃಷ್ಟಿ ನಿಜಕ್ಕೂ ಭಗವಂತನದು. ಆತನೇ *'ಅಂತರ್ಬಹಿಶ್ಚ ತತ್ಸರ್ವಂ'* ಅಂತ ವ್ಯಾಪ್ತನಾದವನು. ಆತನೇ ಸರ್ವೇಶ್ವರ, ಸರ್ವಾಂತರ್ಯಾಮಿ. ಸಮಸ್ತವನ್ನೂ ನೋಡುತ್ತಿರುವವನು. ಸಮಸ್ತರಿಗೂ ಆಶ್ರಯ ನೀಡುತ್ತಿರುವವನು. ನಮ್ಮದು ಅನ್ನುತ್ತಿರುವುದಕ್ಕೆಲ್ಲ ಅವನೇ ಒಡೆಯ. ಅವನ ಆಜ್ಞೆ ಪಾಲಿಸಿದವರಿಗೆ ಇದು ನನ್ನದು ಅಂತ ಹೇಳಿಕೊಳ್ಳುವ ಅವಕಾಶ, ಆತನ ಪ್ರಸಾದ, ಹಾಗಾಗಿ ನಮ್ಮದೆಲ್ಲವನ್ನೂ ಆತನಿಗೇ ಅರ್ಪಿಸಿ ಭುಂಜಿಸುವುದು. ಇಲ್ಲಿ ಇನ್ನೂ ಒಂದು ಧ್ವನಿತ ಅಭಿಪ್ರಾಯವಿದೆ. ನಾವು ಉಣ್ಣುವಾಗಲೆಲ್ಲ ಆತನಿಗೆ ನೀಡುವುದು, ಅಗ್ನಿಗೆ ಹವಿಸ್ಸಾದಿ ಕೊಡುವುದು, ಹಸಿದ ಅತಿಥಿಗಳಿಗೆ ಬಡಿಸುವುದು, ನಂತರವೇ ನಾವು ಸ್ವೀಕರಿಸುವುದು, ಹೀಗೆ ಮಾಡದಿದ್ದರೆ ಪಾಪಾನ್ನ ತಿಂದಂತೆ ಅಂತಲೂ ಹೇಳಿದ್ದಿದೆ.

ಈ ಪ್ರಪಂಚ ಆತನ ವಿಶ್ವಸ್ತಮಂಡಲ ಇದ್ದ ಹಾಗೆ, ಅದರಲ್ಲಿ ನಾವು ಸದಸ್ಯರು. ಆತನ ನಿರ್ದೇಶನದಂತೆ ಕರ್ತವ್ಯ ಕರ್ಮ, ಮಾಡುವುದಕ್ಕೆ ಮಾತ್ರ ಅಧಿಕಾರಿಗಳು, ಉಳಿದದ್ದು ನಮ್ಮದಲ್ಲ. ಬೇಕಾದಷ್ಟು ಇದ್ದರೂ ಉಪಭೋಗಿಸುವುದಕ್ಕೆ ನಮ್ಮದೇ ಸಂಪೂರ್ಣ ಅಧಿಕಾರವಿಲ್ಲ. ಸಂಸ್ಥೆ ಬೆಳೆಸುವುದು ಸದಸ್ಯರ ಹೊಣೆ. ಖರ್ಚುಮಾಡಬೇಕಾದರೆ ಅಲ್ಲಿಯ ನಿಯಮಕ್ಕೆ ಸರಿಯಾಗಿ ಇರಬೇಕು. ಹಾಗೇ ನಮ್ಮದೂ ಆಗಿದೆ. ನಮ್ಮಿಂದ ಏನಾದರೂ ಅವ್ಯವಹಾರ ನಡೆದರೆ ನಾವೇ ಶಿಕ್ಷೆಗೆ ಒಳಗಾಗಬೇಕು. ಯಾರೂ ಅದನ್ನು ನೋಡುವುದಿಲ್ಲ. ಯಾರಿಗೂ ಈ ಸಂಗತಿ ಗೊತ್ತಾಗುವುದಿಲ್ಲ. ಅಂದರೆ ಆತನೇ ನಮ್ಮಲ್ಲಿರುತ್ತಾನೆ. 'ಈಶ್ವರಃ ಸರ್ವಭೂತಾನಾಂ ಹೃದ್ದೇಶೇರ್ಜುನತಿಷ್ಠತಿ' ಧರ್ಮ ನೀತಿ-ನಿಯಮಗಳಲ್ಲಿ ಏನೇ ತಪ್ಪಾಗಿದ್ದರೂ ಆತನಿಗೆ ತಿಳಿದು ಬರುತ್ತದೆ. ಅದನ್ನೆಲ್ಲ ಆತ ದಾಖಲಿಸಿಕೊಳ್ಳುತ್ತಾನೆ.

ಇದು ಕೇವಲ ಬಾಹ್ಯ ಮಾತ್ರವಲ್ಲ. ಮನಸ್ಸಿನಲ್ಲಿ ಏನಾದರೂ ಪಾಪ ವಿಚಾರ- ಅಯೋಗ್ಯ ಸಂಗತಿ ಮೂಡಿದರೂ ಸರಿ, ಅದೂ ಸಹ ಅಪರಾಧವೇ ಆಗುತ್ತದೆ. ಹಣ-ಹೆಣ್ಣಿನ ಆಸೆಗಾಗಿ ಏನಾದರೂ ವಂಚನೆ-ಲೋಭ-ಮೋಹಗಳು ಸುಳಿದಾಡಿದರೂ ಅದು ಮೊದಲಿಗೆ ಮನಸ್ಸಿನಲ್ಲಿ ಮೂಡಿಕೊಳ್ಳುತ್ತದೆ. ಈ ಕಾರಣಕ್ಕಾಗಿಯೇ ಕಾಯಾ-ವಾಚಾ-ಮನಸಾ ಇವುಗಳ ಶುದ್ಧತೆಯೂ ಇರಬೇಕು. ಇವೇ ತ್ರಿಕರಣಗಳಾಗಿವೆ. ನಮ್ಮ ಕರ್ತವ್ಯ ಕರ್ಮಗಳಲ್ಲಿ ಇವುಗಳ ಬದ್ಧತೆಯೂ ಬೇಕು.

ನಾವು ನಮಗೆ ವಿಹಿತವಾದ ಕರ್ಮಗಳನ್ನು ಮಾಡದೇ ಇದ್ದರೆ ಉಣ್ಣುವುದಕ್ಕೂ ಅಧಿಕಾರ- ಅರ್ಹತೆ ಇರುವುದಿಲ್ಲ. ಸರಿಯಾದ ಕಾಯಕ-ಕರ್ಮ ಮಾಡದೇ ಇನ್ನೊಬ್ಬರ ದುಡಿಮೆಯಿಂದ ಬಂದದ್ದರಲ್ಲಿ ಊಟಮಾಡುವವನು ಸಾಮಾಜಿಕ ದೃಷ್ಟಿಯಲ್ಲಿ ಕಳ್ಳನ ಸಮಾನವೆಂದೂ- ನಿಕೃಷ್ಟನೆಂದೂ ತಿಳಿಸಿದ್ದಿದೆ. ಹತ್ತಾರು ಜನರು ದುಡಿದು ಮತ್ತೆ ಕೆಲವರು ಅದನ್ನು ಬಳಸುವುದರಿಂದಲೂ ಶೋಷಣೆಯಾಗುತ್ತದೆ. ಉತ್ಪಾದನೆ ಕುಗ್ಗುತ್ತದೆ. *'ಕುರ್ವನ್ನೇವೇಹ ಕರ್ಮಾಣಿ ಜೀವಿಷೇ'* ಎಂದು ಉಪನಿಷತ್ತು ತಿಳಿಸಿದರೆ 'ಕಾಯಕವೇ ಕೈಲಾಸ'ವೆಂದು ಬಸವಣ್ಣನವರು ಹೇಳಿದ್ದಾರೆ. ಶಕ್ತಿ ಇದ್ದವರು ದುಡಿದೇ ಉಣ್ಣುವುದು ಸಾಮಾಜಿಕ ಧರ್ಮ, ನಿಯಮ. *'ನಹಿ ಶ್ರಾಂತಸ್ಯ ಸಖ್ಯಾಯ ದೇವಾಃ'*, ದುಡಿಯದಿದ್ದ ಸೋಮಾರಿಗಳನ್ನು ದೇವತೆಗಳೂ ನೋಡುವುದಿಲ್ಲ ಎಂಬುದು ಅದರ ಆಶಯ, ಆದೇಶ.

ನಾವು ಸ್ವತಂತ್ರರು ಅಂತ ತಿಳಿದುಕೊಂಡಿದ್ದೇವೆ. ಅದೇನೋ ಸರಿ. ಆದರೆ ಅದು ಕರ್ಮ ಮಾಡುವುದಕ್ಕೆ ಮಾತ್ರ. ಅದರ ಫಲ ದೈವಾಧೀನ; *'ದೈವಾಧೀನಂ ಜಗತ್ ಸರ್ವಂ'* ಆಗಿದೆ. ಫಲವನ್ನು ನಿರೀಕ್ಷಿಸುವ, ಪರೀಕ್ಷಿಸುವ ಹಾಗಿಲ್ಲ. ಅಂದರೆ ಅದಕ್ಕೆ ಫಲವಿಲ್ಲವೇ ಎಂದು ಪ್ರಶ್ನಿಸಬಾರದು. ಯಾವುದೇ ಕರ್ಮಕ್ಕೂ ಸಂಬಂಧಿಸಿದ ಫಲವಿದ್ದೇ ಇದೆ. ಕರ್ಮದೊಂದಿಗೆ ಇದ್ದ ಇದನ್ನು ನಾವು ಅಪೇಕ್ಷೆ ಪಡದೇ

ಇದ್ದರೆ ಅದು ಅಂತ್ಯಗೊಳ್ಳುವುದಿಲ್ಲ. ಅದು ಭಗವಂತನನಿಗೇ ಸೇರಿದ್ದು ಅಂತ ತಿಳಿದು ನಿರ್ಲಿಪ್ತ ಭಾವದ ಕರ್ಮವಾಗಿ ಅದನ್ನು ಅವನಿಗೆ ಅರ್ಪಿಸಿ ಬಿಟ್ಟರೆ ಆತನೇ *'ಯೋಗಕ್ಷೇಮಂ ವಹಾಮ್ಯಹಂ'* ಆಗುತ್ತಾನೆ. ಇಲ್ಲಿ ಕರ್ಮದಲ್ಲಿ ಮಾತ್ರ ಆಸಕ್ತಿ ಇದ್ದರೆ ಸಾಕು. ಮುಂದಿನ ಯೋಗ ಕರ್ಮದಲ್ಲಿ ಆಶ್ರಿತ, ಅದಕ್ಕಾಗಿ ಅವಸರ, ಆತಂಕ ಬೇಡ ನಂಬಿಕೆಯೇ ಅದರ ಜೀವ ಚೈತನ್ಯ.

ಜೀವನಕ್ಕೂ ಒಂದು ಸಂಹಿತೆ ಇದೆ. ಅದು ಭಗವದಾಜ್ಞೆಯ ಮೂಲಾಂಶಗಳು, ತಪಸ್ವಿಗಳು, ಮಹರ್ಷಿಗಳು, ಸಾಧು-ಸಂತರಿಂದ ಪ್ರೇರಿತವಾದುವು. ಅದರಂತೆಯೇ ನಾವು ಇರಬೇಕು. ಧರ್ಮ ಶ್ರದ್ಧೆ, ಕರ್ಮ, ನಿಷ್ಠೆ, ದೇವರಲ್ಲಿ ಅಪಾರ ಭಕ್ತಿ ಇದ್ದವರು ನಿತ್ಯ ಮುಕ್ತರಾಗುತ್ತಾರೆ. ತಮ್ಮ ಜೀವನದ ಭಾರವನ್ನೆಲ್ಲ ಭಗವಂತನಿಗೆ ಒಪ್ಪಿಸಿ ಬಿಡಬೇಕು. 'ಯದ್ಯತ್-ಕರ್ಮ ಕರೋಮಿ ತತ್ತದಖಿಲಂ ಶಂಭೋತರಾಧನಂ' ಅಂತಲೇ ತಿಳಿಯಬೇಕು. ಅವನಿಂದ ಉಪದಿಷ್ಟವಾದ ಕರ್ತವ್ಯ ಕರ್ಮ ಮಾತ್ರ ನನ್ನದು. ಅದರಿಂದ ಲಭ್ಯವಾಗಬಹುದಾದ ಫಲಗಳೆಲ್ಲ ಆತನ ಅನುಗ್ರಹ-ಪ್ರಸಾದವೆಂದು ತಿಳಿಯಬೇಕು. ಭಗವಂತನೂ ನಮ್ಮಲ್ಲಿ ವಾಸವಾಗಿದ್ದಾನೆಂಬ ದಾಸಭಾವ ಬೆಳಸಿಕೊಂಡರೆ ನೀತಿ-ನಿಯಮಗಳು ದಾರಿ ತಪ್ಪುವ ಸಂಭವವಿರುವುದಿಲ್ಲ. ಅದೇ ನಮಗೆ ತಾರಕ, ಸಂರಕ್ಷಕ.

*

## ಸೋಮೇಶ್ವರ ಶತಕ

ಶ್ರೀಮತ್ಕೈಲಾಸವಾಸಂ ಸ್ಮಿತಮೃದುವಚನಂ
ಪಂಚವಕ್ತ್ರಂ ತ್ರಿಣೇತ್ರಂ ।
ಪ್ರೇಮಾಂಕಂ ಪೂರ್ಣಕಾಮಂ ಪರಮಪರಶಿವಂ
ಪಾರ್ವತೀಶಂ ಪರೇಶಂ ॥
ಧೀಮಂತಂ ದೇವದೇವಂ ಪುಲಿಗಿರಿ ನಗರೀ
ಶಾಸನಾಂಕಂ ಮೃಗಾಂಕಂ ।
ಸೋಮೇಶಂ ಸರ್ಪಭೂಷಂ ಸಲಹುಗೆ
ಜಗಮಂ ಸರ್ವದಾ ಸುಪ್ರಸನ್ನಂ ॥

ಶ್ರೀಮತ್ಕೈಲಾಸವಾಸಿಯಾದ, ನಗೆಯಿಂದ ಕೂಡಿದ, ಮೃದು ವಾದ ಮಾತುಳ್ಳ, ಐದು ಮುಖವುಳ್ಳ, ಮೂರು ಕಣ್ಣುಳ್ಳ ಪ್ರೇಮವೇ ಗುರುತಾಗುಳ್ಳ, ಸರ್ವ ಸಮೃದ್ಧಿಯನ್ನೊಳಗೊಂಡಿರುವ, ಸರ್ವೋತ್ಕೃಷ್ಟ ಮಂಗಳಸ್ವರೂಪನಾದ, ಪಾರ್ವತೀ ಪತಿಯಾದ, ಸರ್ವೇಶ್ವರನಾದ, ಜ್ಞಾನಿಯಾದ, ದೇವತೆಗಳಿಗೆ ದೇವನಾದ, ಪುಲಿಗಿರಿ ನಗರಿಯ ಪಾಲನೆಯೇ ಲಕ್ಷಣವಾಗುಳ್ಳ, ಜಿಂಕೆಯನ್ನು ಕೈಯಲ್ಲಿ ಧರಿಸಿರುವ, ನಾಗಾಭರಣನಾದ ಸೋಮೇಶ್ವರನು ಸರ್ವದಾ ದಯೆಯಿಂದ ಲೋಕವನ್ನು ರಕ್ಷಿಸಲಿ.

## ವಚನಾಮೃತ (ಅಂತರಂಗ ದರ್ಶನ)

- ಬಿ.ಎನ್. ತೇಜಸ್ವಿನಿ ಅರಸ್ (ತೇಜ ನಿನದ) ಬೆಂಗಳೂರು.

ಕಾಂಕ್ಷೆಗಳ ಸಂಗಬಿಟ್ಟೆ
ಯಾತನೆಗಳು ಕಮರಿದುವು ।
ಸತ್ಸಂಗದ ಕರ್ತವ್ಯವೆನ್ನ ಕರೆಯಿತು
ಸದ್ಗುರು ಬಸವ ನಗೆಯಾಡಿದರೆನ್ನೊಡನೆ ।

ಬಿಲ್ಲಬಾಗಿಸುವಾಸೆ, ಕಲ್ಲನುಡಿಸುವ ಆಸೆ ।
ಮಲ್ಲಿಕಾರ್ಜುನನೆ ನೀ ಎನ್ನ ಒಡನಿರಲು
ಕನ್ನಡದ ಸೊಲ್ಲಲ್ಲಿ ಕಾವ್ಯ ಹೊಸೆಯುವ ಆಸೆ
ಬಲ್ಲಿದರ ಮನಕೆ ಕಬ್ಬ ಜೊಲ್ಲೆಯಾಗುವ ಆಸೆ ।

ಹರಣಮಾಡಿದರೇನು ವಿಧಿಯೆನ್ನ ಪ್ರಾಣ ?
ಮೃತ ಜಡ ದೇಹದ ಜಾಡಿ ಇಡೆವುದು ।
ಅಮೃತಾತ್ಮವದು ನಿನ್ನ ಜಾಡು ಹಿಡಿವುದು ।
ನಿಜಗೂಡು ಸೇರುವುದೆನ್ನ ಪುಣ್ಯಾಪದು ಕೇಳ

ಜ್ಞಾನಿ ಬೀಜಾಕ್ಷರದ ಮುಸುಗಿಟ್ಟು ಮಡಿಸಿಲ್ಲ ।
ಮೀನು ಈಜುವೆನೆಂದು ರಾಹ ಮೂಡಿಸಲಿಲ್ಲ ।
'ಧೇನು'- ನೀನಿರುವಾಗ ನಾ ಅಂಟು- ನೀ ಬೆಲ್ಲ
ದಾನಿ ನಾ ಎಂದೊಡೆ ದೌರ್ಭಾಗ್ಯ -ದೌರ್ಬಲ್ಯ

ನೀ ಕೊಟ್ಟುದೇ ದೇಹ, ನೀ ಇಟ್ಟುದೇ ಉಸಿರು ।
ನೀನಿತ್ತ ಕೊಡುಗೆಯೋ ಈ ಬದುಕು, ಈ ಬಸಿರು ।
ನಾ ಏನ ಮುಡುಪಿಡಲಿ ಬಕುತಿಯಾ ಹೊರತು ?
ಕರ್ಮಶೇಷದ ಕೊನರು ಕಮರದಾ ಹೊರತು ?

ಕೊಳ್ಳಲಾರರು ನೋವ, ಮುಳ್ಳುನಾಲಗೆ ಜನರು ।
ಹೇಳಿಕೊಳೆ ಫಲವೇನು ಮುಂದರಿಯಲೇಬಿಡರು
ಬೀಳುವುದನೇ ಎಣಿಪ ಕೊಳ್ಳಿಗಣ್ಣವರು ।
ನೀಡಿದಾ ಕೈಯಿದುವು ಬೇಡಲರಿಯದು ತಂದೆ,
ಪ್ರಾಣಾಭಿಮಾನಗಳು ನಿನ್ನದೆಂಬೆ

- ತೇಜ ನಿನದ ॥







## ತಾಳುಮೆಯಿನಿರು ನೀನು ಮಂಕುತಿಮ್ಮ

- ಅಮರಗುಂಡಪ್ಪ ಹೂಗಾರ ಹುಲ್ಲೂರು ಮತ್ತು ಅಂಚೆ, ಸಿಂಧನೂರು ತಾ॥- ೫೮೪ ೧೨೮.

*ತಾಳಿ ಮೆಲು ಮಲಸೊಮ್ಮೆ ಧಾಳಿ ರಭಸದಿನ್ನೊಮ್ಮೆ*
*ಹೇಳದೆಯ ಕೇಳದಯೆ ಬಹನು ವಿಧಿರಾಯ*
*ಕೀಳ ಮೇಲಾಗಿಪನು ಮೇಲ ಕೀಳಾಗಿಪನು*
*ತಾಳುಮೆಯಿನಿರು ನೀನು ಮಂಕುತಿಮ್ಮ*

ನಮ್ಮ ಬಾಳಿನ ಪಥದಲ್ಲಿ ನಾವು ಸುಗಮವಾಗಿ ಸಾಗಿ, ಕೊನೆಗಾಣಬೇಕಾದರೆ, ನಮ್ಮಲ್ಲಿ ತಾಳ್ಮೆಯೆಂಬ ತ್ರಾಣವು ನಮಗೆ ಅತಿ ಅವಶ್ಯವಾಗಿರಬೇಕಾಗುತ್ತದೆ. ತಾಳ್ಮೆಯಿಂದಲೇ ಮಾನವನ ಬಾಳು ವಿಕಾಸಗೊಳ್ಳುತ್ತದೆ ಮತ್ತು ಅವನ ಜೀವನ ವಿಡೀ ಸುಖಮಯವಾಗಿದ್ದು, ಅವನಲ್ಲಿ ಜ್ಞಾನ ಜ್ಯೋತಿಯು ಪ್ರಕಾಶಿ ಸುತ್ತದೆ. ಆಗ ಮಾನವನ ಜೀವನಕ್ಕೆ ಮಹತ್ವದ ಮೌಲ್ಯವು ಬರುತ್ತದೆ ಹಾಗೂ ಅವನ ಬದುಕಿಗೂ ಮಹಾ ಕೀರ್ತಿಯು ಲಭಿಸುತ್ತದೆ. ತಾಳಿದವನು ಬಾಳಿಯಾನು- ತಾಳದವನು ಬೇಗನೆ ಹಾಳಾದನು, ತಾಳ್ಮೆಯಿರಲಿ ಆದರೆ ಹಾಳು ಮಾರಿಯ ಸೋಮಾರಿಗಳಾಗಬೇಡಿರಿ, ಎಂಬುದು ನಾಣ್ನುಡಿಗಳುಂಟು. ಮಾನವನು ವಿವೇಕಿಯಾದರೇನು, ವಿದ್ಯಾವಂತನಾದರೇನು, ಯೋಗಿಯಾದರೇನು, ಭೋಗಿಯಾದರೇನು? ತಾಳ್ಮೆಯೊಂದಿಲ್ಲದಿದ್ದರೆ, ಆ ವ್ಯಕ್ತಿಯ ಬದುಕೆ ಬರಡಾಗಿ, ಮನವೆರಡಾಗಿ, ಅವನ ಜೀವನವೇ ಹಾಳಾಗುತ್ತದೆ.

ನಮ್ಮ ಬಾಳಿನ ಬಯಲಾಟದಲ್ಲಿ ವಿಧಿರಾಯನದೊಂದು ಚಮತ್ಕಾರದ ಆಟ. ಅವನು ಕಷ್ಟ, ನಷ್ಟ, ಕೋಟಲೆಗಳೆಂಬ ವೀರಸೈನ್ಯದಿಂದೊಡಗೂಡಿಕೊಂಡು ನಮ್ಮ ಮೇಲೆ ಅತಿ ರಭಸದಿಂದಲೇ ದಾಳಿ ಮಾಡಲು ನಮಗೆ ತಿಳಿಸದಲೆ, ಹೇಳದೆ, ಕೇಳದಲೆ, ಬಂದು ನಮ್ಮೊಂದಿಗೆ ಯುದ್ಧ ಮಾಡಲು, ಸಿದ್ಧನಾಗಿಯೇ ನಿಲ್ಲುವನು. ಅದಕ್ಕಾಗಿ ಮಾನವನು ತಾಳ್ಮೆಯೆಂಬ ಖಡ್ಗವ ಹಿಡಿದು, ಆ ಸೈನ್ಯದೊಂದಿಗೆ, ಹಿಂಜರಿಯದೆ, ಅಂಜದೆ, ಅಳುಕದೆ ಹೋರಾಡಿದರೆ ಮಾತ್ರ ಜಯ ಗಳಿಸುವುದು ಖಂಡಿತವೆಂದು ಪಂಡಿತರು ಹೇಳಿದ್ದಾರೆ. ನಾವು ನಮ್ಮ ಜೀವನದಲ್ಲಿ 'ತಾಳ್ಮೆ' ಎಂಬುದೊಂದು ಗುಣವನ್ನು ಸಂಪಾದಿಸಿಕೊಳ್ಳಬೇಕು.

ಮಾನವನಲ್ಲಿ ತಾಳ್ಮೆಯ ತ್ರಾಣವೊಂದಿದ್ದರೆ ಪ್ರಾಣಕ್ಕೇನು ಹಾನಿಯೆಂಬುದಿಲ್ಲ. ಎಂಥ ಕಡುಕಷ್ಟಗಳು ಬಂದೊದಗಿದರೂ, ಆ ವ್ಯಕ್ತಿಯು ಎಳ್ಳಷ್ಟು ಕೊರಗುವುದಿಲ್ಲ ಮತ್ತು ಬಡತನವೆಂತೆಂಬ ಭೂತವು ಬಂದು ಬಹು ಪೀಡಿಸಿದರೂ ಕೂಡ ತಾಳ್ಮೆಯುಳ್ಳವನು ತನ್ನ ಸ್ಥಿತಿಗತಿಯನ್ನು ಬದಲಾಯಿಸಿಕೊಳ್ಳುವುದಿಲ್ಲ. ಪಾಂಡಿತ್ಯ ಪ್ರವೀಣರಾದ ನಾಡಿನ ಹಿರಿಯ ಕವಿಗಳಾದ ಸಾಹಿತ್ಯ ವಿದ್ವನ್‌ಮಣಿಯಾದ ಡಿ.ವಿ.ಜಿಯವರ ವಚನವು ಬಹಳ ಅರ್ಥಗರ್ಭಿತವಾಗಿದೆ. ಅವರ ವಚನ ಪ್ರಸಾದವನ್ನುಂಡು ಪಚನ ಮಾಡಿಕೊಂಡವನೆ ಧನ್ಯಾತ್ಮನು, ತಾಳ್ಮೆಯೆಂಬ ಶಬ್ಧಕ್ಕೆ ತಡೆದುಕೊಳ್ಳುವಿಕೆ, ಸಹನೆ, ಸೈರಣೆ, ಶಾಂತಿ, ಸಮಾಧಾನಸ್ಥಿತಿ, ಎಂಬ ಅರ್ಥಗಳುಂಟು.

ತಾಳ್ಮೆಯ ಸುಗುಣಶೀಲತೆಯು ಮಾನವನ ಜೀವನದಲ್ಲಿ ಇದೊಂದು ಅಮೂಲ್ಯವಾದ ಸಂಪದವಾಗಿದೆ. ಇಂಥ ಸಂಪದದ ಸಿರಿಯು ಸ್ತ್ರೀಯರಲ್ಲಿಯೇ ಮಾತ್ರ ಹೆಚ್ಚಿನ ಮಟ್ಟದಲ್ಲಿರುವುದೆಂದು ಬಲ್ಲವರ ನಿರ್ಣಯವು. ಇದಕ್ಕೆ ಅನೇಕ ಮಹಾತ್ಮೆಯರ ಜೀವನ ಚಾರಿತ್ರಗಳೆ ಸಾಕ್ಷಿಯಾಗಿ ಪುರಾಣ, ಪುಣ್ಯಕಥೆಗಳಲ್ಲಿ ಸಾರುತ್ತವೆ. ಹೇಮರೆಡ್ಡಿಮಲ್ಲಮ್ಮನ, ಅತ್ತೆ, ನಾದಿನಿ, ನೆಗಣ್ಣೆಯರು ಆಕೆಗೆ ಎಷ್ಟೋ ಕೊಡಬಾರದ ಕಷ್ಟಗಳನ್ನೇ ಕೊಟ್ಟರು ಮತ್ತು ಆಡಬಾರದ ಅಲ್ಲಸಲ್ಲದ ಅಲ್ಪನುಡಿಗಳನ್ನೇ ನುಡಿದಾಡಿದರೂ ಆ ತಾಯಿ ಮಲ್ಲಮ್ಮನಲ್ಲಿದ್ದ ತಾಳ್ಮೆಯ ತ್ರಾಣಶಕ್ತಿಯು ಕುಗ್ಗಲಿಲ್ಲ ಮತ್ತು ಮಲ್ಲಯ್ಯನ ಮೇಲಿದ್ದ ಅಪಾರ ಭಕ್ತಿಯು ಬರಡಾಗಲಿಲ್ಲ. ಇದಕ್ಕೆ ಆಕೆಯಲ್ಲಿದ್ದ ತಾಳ್ಮೆಯ ಮಹೋನ್ನತೆಯೇ ಕಾರಣವಾಗಿರುತ್ತದೆ. ಇಂಥ ತಾಳ್ಮೆಯಿಂದ ಮಹತ್ವದ ಮಟ್ಟಕ್ಕೇರಿದ ಮಹಿಳೆಯರ ಮಾಹಿತಿಗಳು ಸಾಕಷ್ಟು ಇವೆ.

ತಾಳ್ಮೆಯ ಗುಣಶೀಲತೆಯು ಹೆಣ್ಣುಮಕ್ಕಳಲ್ಲಿಯೇ ಸಂಪೂರ್ಣವಾಗಿರುವುದರಿಂದಲೇ, ಗುರುಹಿರಿಯರು ತಾಳಿಕೊಂಡು ಬಾಳು ಎಂದೇ ಹೆಣ್ಣಿನ ಕೊರಳಿಗೆ ತಾಳಿ ಕಟ್ಟುವ ಸಂಕೇತವನ್ನು ರೂಢಿಯಲ್ಲಿ ತಂದು ತೋರಿದ್ದಾರೆ. ಈ ತಾಳಿಯ ಭಾಗ್ಯವ ಪಡೆದ ಮಹಿಳೆಯು ಸಮಜದಲ್ಲಿ ಸೌಭಾಗ್ಯ ವತಿಯಾಗಿ ಮಹಾಲಕ್ಷ್ಮಿಯಂತೆ ಸುಂದರವಾಗಿ ಶೋಭಿಸುವಳು. ಎಲ್ಲಾ ಭಾಗ್ಯಕ್ಕಿಂತಲೂ ಈ ಸೌಭಾಗ್ಯವೇ ಶ್ರೇಷ್ಠವೆಂದು ಮಹಿಳೆಯರ ಒಮ್ಮನದ ಒಮ್ಮತವಾಗಿದೆ. ಮತ್ತು ಸ್ತ್ರೀ ಪುರುಷರಲ್ಲಿ ತಾಳ್ಮೆಯ ಗುಣ ಸಂಪನ್ನತೆಯಲ್ಲಿ, ಸ್ತ್ರೀಯರಿಗೇ ಸಿಂಹಪಾಲು ಎಂಬುದು ಸತ್ಯದ ಮಾತಾಗಿದೆ. ಜೀವನದಲ್ಲಿ ತಾಳ್ಮೆಯನ್ನು ಕಳೆದುಕೊಂಡ ವ್ಯಕ್ತಿಗಳು, ಕೋಪಿಗಳಾಗಿ, ಪಾಪಿಗಳಾಗಿ, ಪರಿತಪಿಸುತ್ತ ಬಹು ತಾಪಿಗಳಾಗಿ ಬಾಳುವರಲ್ಲದೆ, ಈ ಸಮಾಜದಲ್ಲಿ ತಮ್ಮ ಘನತೆ, ಗೌರವ, ಹಿರಿಮೆಗಳನ್ನು ಕಳೆದುಕೊಳ್ಳುತ್ತಾರೆ. ಏನನ್ನಾದರೂ ಕಳೆದುಕೊಂಡು ಬಾಳಬಹುದು, ಆದರೆ ತಾಳ್ಮೆಯನ್ನು ಕಳೆದುಕೊಂಡು ಬಾಳುವುದು ಕಷ್ಟ.

ತಾಳ್ಮೆಯುಳ್ಳ ವ್ಯಕ್ತಿಯು : ಯೋಗಿಯಾಗಬಲ್ಲನಯ್ಯ
ತಾಳ್ಮೆಯುಳ್ಳ ವ್ಯಕ್ತಿಯು : ತ್ಯಾಗಿಯಾಗಬಲ್ಲನಯ್ಯಾ
ತಾಳ್ಮೆಯುಳ್ಳ ವ್ಯಕ್ತಿಯು : ತತ್ವಜ್ಞಾನಿಯಾಗಬಲ್ಲನಯ್ಯಾ
ತಾಳ್ಮೆಯುಳ್ಳ ವ್ಯಕ್ತಿಯು : ದೇವದರುಶನ
ಪಡೆಯಬಲ್ಲನಯ್ಯಾ
ತಾಳ್ಮೆಯುಳ್ಳ ವ್ಯಕ್ತಿಯು : ಜಗದ್ಗುರುವಾಗಿ ಜಗದಲಿ
ಪೂಜಿಸಿಕೊಳ್ಳಬಲ್ಲನಯ್ಯಾ.
ಅಮರಗುಂಡಪ್ರಿಯಾ ಅಖಂಡ ಜ್ಯೋತಿ
ಅದ್ವೈತಾನಂದ
ಗುರುವಿನಂತಯ್ಯಾ

ತಾಳ್ಮೆಯುಳ್ಳ ವ್ಯಕ್ತಿಯು ತನ್ನ ಬಾಳಿನಲ್ಲಿ ಬರುವ ಏನೆಲ್ಲಾ ಕೊರತೆಗಳನ್ನು ಸಹನೆಯಿಂದಲೇ ಸ್ವೀಕರಿಸಿ ಅವುಗಳನ್ನು ಅನುಭವಿಸುತ್ತಾನೆ. ತಾಳ್ಮೆಯುಳ್ಳಾತನ ಮೊಗದಲಿ ಬ್ರಹ್ಮತೇಜವು ಬೆಳಗುತ್ತದೆ. ತಾಳ್ಮೆಯುಳ್ಳ ಮಾನವ ಮಹಾದೇವನಾಗಿ, ಮಹಾತ್ಮನಾಗಿ ಈ ಜಗದಲಿ ಕೀರ್ತಿಶಾಲಿಯಾಗಿ ಬಾಳುತ್ತಾನೆ. ಮತ್ತು ಆತನು ತನ್ನವರಿಗೂ, ಅನ್ಯರ ಅಸ್ತಿತ್ವಕ್ಕಾಗಿಯೂ, ಸುಖ, ಸಂತೋಷಕ್ಕಾಗಿಯೂ, ಪರ ಹಿತರಕ್ಷಣೆಗಾಗಿಯೂ ಸದಾ ಶ್ರಮಪಡುತ್ತಾನೆ. ಒಂದು ವೇಳೆಯಲಿ, ಇತರರು ತನಗೆ ಕೊಡುವ ದುಃಖದುಮ್ಮಾನಗಳಿಗೆ. ತಾ ರೋಧಿಸಿಕೊಂಡು ಬಹು ಬಾಧೆಗಳಿಗೊಳಗಾಗಲಾರನು. ಹಾಗೂ ದುರುಳರಾಡುವ ದುರ್ನುಡಿಗಳಿಗೆ ಕಿಂಚಿತ್ ಕಿವಿಗೊಡಲಾರನು. ಇಂತಿದ್ದ ವ್ಯಕ್ತಿಗೆ ಜಗತ್ತಿನಲ್ಲಿ ಕೆಲ ಕುಹಕಿಗಳು, ಹೇಡಿಯಂತಲು, ನಪುಂಸಕನೆಂತಲೂ ಮಾನಹೀನನೆಂತಲೂ, ಎಂತೆಲ್ಲಾ ಆರೋಪಗಳ ಸರಮಾಲೆಯನ್ನೇ ಹೆಣೆಯುವುದುಂಟು. ಮಾನವನಲ್ಲಿ ತಾಳ್ಮೆಯ ತ್ರಾಣದ ಧೈರ್ಯದೊಂದಿಗೆ ಅನೇಕ ಏರು-ಪೇರುಗಳಲ್ಲಿನ ಫಲಾಫಲ ಗಳ ಸಮಚಿತ್ತದ ದೃಢ ಕಲ್ಪನೆಗಳು ಇರಬೇಕು. ನಮ್ಮಲ್ಲಿ ವಿವೇಕವು ವಿಕಾಸಗೊಳ್ಳ ಬೇಕಾದರೆ ತಾಳ್ಮೆಯು ನಮ್ಮಲ್ಲಿರಬೇಕಾಗುತ್ತದೆ. ತಾಳ್ಮೆಯು ನಮ್ಮಲಿ ನೆಲೆನಿಲ್ಲಬೇಕಾದರೆ ಶರಣರ, ಸಂತರ ಮಹಾಂತರ ಸಂಗಡೊಡನಾಟವು ಹಾಗೂ ಅವರ ಸೇವಾಭಾವವು ನಮ್ಮಲ್ಲಿರಬೇಕು. ಜ್ಞಾನಿಗಳು ಬೋಧಿಸಿದ ಹಿತನುಡಿಗಳನ್ನು ಆಲಿಸುತ್ತ, ಪಾಲಿಸುತ್ತ ಸನ್ಮಾರ್ಗದಲ್ಲಿ ಸಾಗಿದರೆ ಮಾತ್ರ ತಾಳ್ಮೆಯ ಸಿರಿಸಂಪದವು ಸಂಗ್ರಹವಾಗುವುದು ಖಂಡಿತ.

*ತಾಳ್ಮೆಯೊಂದಿಲ್ಲದೆ ಬಾಳುವನ ಬದುಕು ಹಾಳು ಹಾಳು*
*ತಾಳ್ಮೆಯೊಂದಿಲ್ಲದೆ ಬೋಧಿಸುವ ತತ್ವ ಹಾಳು, ಹಾಳು.*

*

## ವಂದನೆಗಳು

ಶ್ರೀಮಠದ ದಾಸೋಹ ದಿಗಂತ ದಿನದಿಂದ ದಿನಕ್ಕೆ ವಿಸ್ತರಿಸುತ್ತಿರುವುದನ್ನು ಮನಗಂಡ ಉದಾರಮನಸ್ಕರಾದ ಈ ಕೆಳಕಂಡ ಮಹನೀಯರುಗಳು ತಮ್ಮ ಪ್ರೀತಿಪಾತ್ರರ ಸವಿನೆನಪಿನಲ್ಲಿ ಒಂದು ಲಕ್ಷ ರೂಗಳನ್ನು ಮಹಾದಾಸೋಹ ನಿಧಿಗೆ ಸಮರ್ಪಿಸುವುದರ ಮೂಲಕ ತಮ್ಮ ದಾಸೋಹ ತತ್ವ ಪ್ರೇಮವನ್ನು ವ್ಯಕ್ತ ಪಡಿಸಿರುತ್ತಾರೆ. ಶ್ರೀಮಠದ ಸೇವಾಮಣಿಹಕ್ಕೆ ಸಕ್ರಿಯ ಸಹಕಾರವನ್ನು ನೀಡಿರುತ್ತಾರೆ. ಈ ಶುಭಸಂದರ್ಭದಲ್ಲಿ 'ಸಿದ್ಧಗಂಗಾ' ಇವರಿಗೆ ಶ್ರೀ ಸಿದ್ಧಗಂಗಾ ಗುರುಪರಂಪರೆ ಸಕಲ ಸನ್ಮಂಗಳವನ್ನುಂಟುಮಾಡಲಿ ಎಂದು ಹಾರ್ದಿಕವಾಗಿ ವಂದನೆಗಳನ್ನು ಸಲ್ಲಿಸಲು ಸಂತೋಷಿಸುತ್ತದೆ.

ಶ್ರೀ ಜಿ. ನಂಜಪ್ಪನವರು
ನೆಹರು ನಗರ
ಶೇಷಾದ್ರಿಪುರಂ,
ಬೆಂಗಳೂರು-20

ಶ್ರೀ ಬಿ. ಗಾಂಧಿ ಮತ್ತು
ಶ್ರೀಮತಿ ಪುಷ್ಪಲತ, ಅವರು
ಯಲಹಂಕ ಟೌನ್,
ಬೆಂಗಳೂರು.

ಶ್ರೀ ಹೆಚ್. ಚಂದ್ರಶೇಖರ್‌ರವರು,
11ನೇ ಕ್ರಾಸ್, ವಿಲ್ಸನ್ ಗಾರ್ಡನ್,
ಬೆಂಗಳೂರು-27.

ಶ್ರೀ ಬಿ. ನಾಗರತ್ನರವರು
ಕ್ರೆಸೆಂಟ್ ರಸ್ತೆ, ಬೆಂಗಳೂರು,
(ಲೇಟ್ ಶ್ರೀ ಜಿ.ಎಂ. ಪಾಲಾಕ್ಷಯ್ಯ,
ಇವರ ಸ್ಮರಣಾರ್ಥ)

ಶ್ರೀ ದಶರಥರಾಮಯ್ಯನವರು
ನಿ. ಮುಖ್ಯ ಶಿಕ್ಷಕರು,
ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ,
ತುಮಕೂರು.





# ವಿಶ್ವದ ಮಹಿಳಾ ಅನುಭಾವಿಗಳು

ಮಾಲಿಕೆ -೩
## 'ಮೀರಾಭಾಯಿ'

- ಡಾ॥ ಕೆ.ಎಸ್. ರತ್ನಮ್ಮ, ಪ್ರಾಂಶುಪಾಲರು,
೨೮೮೪, ಕೋರ್ಟ್ ಹಿಂಭಾಗ, ಸರಸ್ವತಿಪುರಂ, ಮೈಸೂರು-೫೭೦ ೦೦೯, ದೂ: ೨೫೪೪೫೭೦೯

ಪರಮಾತ್ಮನನ್ನೇ ಪತಿಯೆಂದು ಆರಾಧಿಸಿ ಆಧ್ಯಾತ್ಮದ ಶೃಂಗವನ್ನೇರಿದ ಅಸದೃಶ ವಿರಾಗಿಣಿ ಮೀರಾಬಾಯಿ ಕರ್ನಾಟಕದ 12ನೆಯ ಶತಮಾನದ ಅನುಭಾವಿ ಅಕ್ಕಮಹಾದೇವಿಯ ವ್ಯಕ್ತಿತ್ವಕ್ಕೆ ಸಮನಾದ ಅನುಪಮ ವಿಷ್ಣುಭಕ್ತೆ.

ಮೇವಾಡದ ಪ್ರಸಿದ್ಧ ರಾಜ ಮಹಾರಾಣ ಕುಂಭ (1468)ನ ಪತ್ನಿ. ಈಕೆ ಸುಮಾರು 1498ರಲ್ಲಿ ರಾಠೋಡ್ ವಂಶದ ರಾವ್‌ದೂದಾನ ಮಗ ರತ್ನಸಿಂಹನ ಮಗಳಾಗಿ ಕುಡಕಿ ಗ್ರಾಮದಲ್ಲಿ ಜನಿಸಿದಳು. ಹುಟ್ಟಿದ ಎರಡು ವರ್ಷಗಳಲ್ಲಿ ತಾಯಿಯನ್ನು ಕಳೆದುಕೊಂಡ ಮೀರಾ ತಾತ ರಾವ್ ದೂದಾಜಿಯ ಮನೆಯಲ್ಲಿ ಬೆಳೆದಳು. ಅಲ್ಲಿಯೇ ಶಿಕ್ಷಣವೂ ದೊರೆಯಿತು. ತಂದೆ ಹಾಗೂ ಹತ್ತಿರದ ಸಂಬಂಧಿಗಳು ಯುದ್ಧಗಳಲ್ಲಿ ಹೆಚ್ಚು ಕಾಲ ಕಳೆಯುತ್ತಿದ್ದುದರಿಂದ ಮೀರಾಳಿಗೆ ಆರಂಭದ ಶಿಕ್ಷಣ ಸುಗಮವಾಗಿರಲಿಲ್ಲ. ತಾತ ವಿಷ್ಣು ಭಕ್ತರಾದ್ದರಿಂದ ಮನೆಗೆ ಅನೇಕ ಸಾಧುಸಂತರು ಬರುತ್ತಿದ್ದರು. ಮೀರಾಳಿಗೆ ಬಾಲ್ಯದಿಂದಲೂ ಅವರ ದರ್ಶನ, ಸಂಗದ ಪ್ರಭಾವ, ವೈಷ್ಣವ ಧರ್ಮದ ಬಗ್ಗೆ ಒಲವು ಮೂಡಿ ಧಾರ್ಮಿಕ ಸಂಸ್ಕಾರಗಳು ದೊರೆತವು. ತಾತನ ವಿಷ್ಣುಭಕ್ತಿಯ ಅಚಲ ನಿಷ್ಠೆ ಗಾಢ ಪ್ರಭಾವ ಬೀರಿದವು. ಹೀಗೆ ಅಜ್ಜನ ಪ್ರಭಾವಕ್ಕೆ ಒಳಗಾಗಿ ಇಷ್ಟದೈವವಾಗಿ ಗಿರಿಧರ ಗೋಪಾಲ ಅಂತರಂಗವನ್ನು ಪ್ರವೇಶಿಸಿ ಪತಿಯಾಗಿ, ಒಡೆಯನಾಗಿ ನೆಲೆಸಿದ್ದು ಅವಳ 'ಆರಾಧನೆಯ' ಫಲ. ತಾತನನ್ನು ಅನುಕರಿಸಿ ಗೋಪಾಲನಿಗೆ ಕಿರೀಟ, ತೊಡಿನ ತಿಲಕವಿಟ್ಟು ಆರತಿ ಬೆಳಗುತ್ತ ನಾಮಸ್ಮರಣೆ ಮಾಡುವುದು ಅವಳ ಸಂತಸದ ದಿನಚರಿಯಾಯಿತು. ಈ ಭಕ್ತಿ ಸಂಸ್ಕಾರ ಸಹಜ ರೀತಿ ಆಯಿತು.

ಮೀರಾಳ ಬಾಲ್ಯದ ಬಗ್ಗೆ ಅನೇಕ ದಂತಕಥೆಗಳು ಪ್ರಚಲಿತವಾಗಿವೆ. ಒಮ್ಮೆ ಅವರ ಮನೆಗೆ ಬಂದ ಸಾಧುವಿನ ಬಳಿ ಗಿರಿಧರಲಾಲನ ಸುಂದರ ಮೂರ್ತಿ ಇತ್ತಂತೆ, ಮೀರಾ ಅದರ ಸೌಂದರ್ಯಕ್ಕೆ ಮನಸೋತು ಅದು ತನಗೆ ಬೇಕೆಂದು ಹಟ ಹಿಡಿದಳಂತೆ. ಆದರೆ ಸಾಧು ಕೊಡಲು ನಿರಾಕರಿಸಿ ಹೋಗಿಬಿಟ್ಟನು. ಮೀರಾ ಆ ಮೂರ್ತಿ ದೊರಕದ ನಿರಾಸೆಯಲ್ಲಿ ಅನ್ನಾಹಾರಗಳನ್ನು ತ್ಯಜಿಸಿದಳಂತೆ. ಮರುದಿನ ಭಗವಂತ ಕನಸಿನಲ್ಲಿ ಸಾಧುವಿಗೆ ಕಾಣಿಸಿಕೊಂಡು ಮೀರಾಳಿಗೆ ತನ್ನ ಮೂರ್ತಿಯನ್ನು ಕೊಡಲು ತಿಳಿಸಿದನಂತೆ., ಸಾಧು ಮರಳಿ ಬಂದು ಮೂರ್ತಿಯನ್ನು ಕೊಟ್ಟಾಗ ಮೀರಾ ಆನಂದದಲ್ಲಿ ಪರವಶಳಾಗಿ ಸದಾ ಅದನ್ನು ತನ್ನ ಜತೆ ಇರಿಸಿ ಕೊಂಡು ಪೂಜಿಸತೊಡಗಿದಳು.

ಮತ್ತೊಂದು ದಂತಕಥೆಯ ಪ್ರಕಾರ ಮದುವೆಯ ದಿಬ್ಬಣವೊಂದು ಮೀರಾಳ ಊರಿಗೆ ಬಂದಾಗ ಕೂತೂಹಲಿತ ಮೀರಾ 'ನನ್ನ ಗಂಡ ಯಾರು?' ಎಂದು ತಾತನನ್ನು ಕೇಳಲು ವಿನೋದಕ್ಕೆ ಅವರು 'ನಿನ್ನ ಬಳಿಯಿರುವ ಗಿರಿಧರನ ಮೂರ್ತಿಯೇ ನಿನ್ನ ಗಂಡ' ಎಂದು ಹೇಳಲು ಮೀರಾ ಅದು ಸತ್ಯವೆಂದೇ ತಿಳಿದು ಅಂತೇ ಭಾವಿಸಿ ಗಿರಿಧರನ ಮೇಲಿನ ತನ್ನ ಅತೀತ ಪ್ರೇಮವನ್ನು ಅವನ ಹೆಸರಿನ ಅಂಕಿತದಲ್ಲಿ ಹಾಡುತ್ತಾಳೆ. 'ಮೈ ಗಿರಿಧರ್ ರಂಗ್ ರಾತೀ, ಸೈಯ್ಯಾಂ ಮೈ ಗಿರಿಧರ್ ಸಂಘ್ ರಾತೀ । ಪಂಚರಂಗ್ ಚೋಲಾ ಪಹರ್ ಸಖೀ ಮೈ ಝಿಮೀಟ್ ಖೇಲನ್ ಜಾತಿ। ಝಿರ್‌ಮಿಟ್ ಮಾಂಹೀ। ಮಿಲ್ಯೋ ಸಾಂವರೋ ಖೋಲ್ ಮಿಲೀ ತನ್ ಗಾತೀ' ಎಂಬ ಹಾಡು ಅವಳ ಧೋರಣೆಯನ್ನು ಸ್ಪಷ್ಟಪಡಿಸುತ್ತದೆ. ಗಿರಿಧರ ಗೋಪಾಲನನ್ನು 'ನನ್ನ ಪ್ರಿಯತಮ, ನನ್ನನ್ನು ತನ್ನ ತೋಳತೆಕ್ಕೆಯಲ್ಲಿ ಬರಸೆಳೆದು ಆಲಂಗಿಸಿಕೊಂಡ. ನಾನು ಅವನನ್ನು ನನ್ನ ಎದೆಗೆ ಅಪ್ಪಿಕೊಂಡೆ' ಎಂಬರ್ಥದಲ್ಲಿ ಹಾಡಿದ್ದಾಳೆ.

ಮೀರಾ ಚೆಲುವಿನಿಂದ ಬೆಳೆಯುತ್ತಿರಲು ಸಂಗೀತವನ್ನು ಕಲಿತದ್ದು ಅವಳ ಭಕ್ತಿಗೀತೆಗಳ ರಚನೆಗೆ ಇಂಬು ಕೊಡುತ್ತದೆ. ರಾಜವಂಶದಲ್ಲಿ ಹುಟ್ಟಿದ ಮೀರಾಳ ಸೌಂದರ್ಯ ಅಸಾಧಾರಣವಾಗಿತ್ತು. ಮಹಾರಾಜ್ ರಾಣಾಸಿಂಗ್‌ನ ಹಿರಿಯ ಪುತ್ರ ಭೋಜರಾಜನು ಅವಳ ಚೆಲುವಿಗೆ ಮಾರು ಹೋಗಿ ವಿವಾಹವಾಗುತ್ತಾನೆ. ಮೀರಾ ರಾಣಿಯಾಗಿ ಮಾವನ ಮನೆ ಮೇವಾಡಕ್ಕೆ ಬರುತ್ತಾಳೆ. ಅವಳ ವೈವಾಹಿಕ ಜೀವನ ಸುಖಮಯವಾಗಿ ಸಾಗುತ್ತದೆ.

ಭಾರತದ ಅಂದಿನ ರಾಜಕೀಯ ತಲ್ಲಣದ ಪರಿಸ್ಥಿತಿ ಐಕ್ಯಮತ್ಯವಲ್ಲದೆ ಇದ್ದ ಕಾರಣ ಸಣ್ಣಪುಟ್ಟ ರಾಜ್ಯಗಳನ್ನು ಕಟ್ಟಿಕೊಂಡು ಸ್ವತಂತ್ರರಾಗಿ ಮೆರೆಯುತ್ತಿದ್ದ ಮುಸ್ಲೀಮರು, ರಜಪೂತರು ತಮ್ಮದೇ ಸಾಮ್ರಾಜ್ಯ ವಿಸ್ತರಣೆಯಲ್ಲಿ ನಿರತರಾಗಿದ್ದರು. ಸದಾ ಯುದ್ಧಕಾಂಕ್ಷೆ, ಸಾವು ನೋವುಗಳಿಗೆ ತೆತ್ತುಕೊಂಡು, ರಕ್ತಪಾತ, ಹಿಂಸೆ, ಯುದ್ಧಗಳು ಮಾನವೀಯ ಮನಸ್ಸನ್ನು ಛಿದ್ರಗೊಳಿಸಿದ್ದವು. ಚಿಕ್ಕ ವಯಸ್ಸಿನಿಂದಲೂ ಇಂತಹ ದ್ವೇಷ, ಅಸೂಯೆಗಳಲ್ಲಿ ಜನರು ಅಶಾಂತಿಯಲ್ಲಿ ಮುಳುಗಿದರೂ ನೆಮ್ಮದಿ ಕಳೆದುಕೊಂಡ ಜೀವನ ಸ್ಥಿತಿ ಕಂಡು ವಿಚಲಿತಳಾಗಿದ್ದ ಮೀರಾ, ಧರ್ಮ ಪಥದಲ್ಲಿ ಶಾಂತಿ ಪಡೆದಿದ್ದಳು.

ಪತಿಗೃಹದಲ್ಲಿ ಪ್ರೇಮ, ದಯೆಗಳ ಮೂರ್ತಿ ಗಿರಿಧರನ ಪೂಜೆಗೆ ಅಡ್ಡಿ ಆತಂಕಗಳು ಇರಲಿಲ್ಲ. ಪತಿಯ ಮನೆಯವರು ಶಿವೋಪಾಸಕರಾಗಿದ್ದರೂ ಗಂಡನಾಗಲೀ, ಇತರರಾಗಲೀ ಅವಳ ವಿಷ್ಣುಪೂಜೆಗೆ ತೊಂದರೆ ನೀಡಲಿಲ್ಲ. ಪ್ರೋತ್ಸಾಹವಿತ್ತು. ಆದರೆ ವಿಧಿಯು ತನ್ನ ಕೈವಾಡವನ್ನು ತೋರಿಸದೆ ಇರದು ಎಂಬಂತೆ ಮೀರಾಳ ಪತಿ ಭೋಜರಾಜನು ಬಾಬರನೊಂದಿಗೆ ನಡೆಯುತ್ತಿದ್ದ ಯುದ್ಧದಲ್ಲಿ ಮರಣಹೊಂದುವನು. ಬಾಲ್ಯದಲ್ಲಿ ತಾಯಿಯನ್ನು ಕಳೆದುಕೊಂಡಿದ್ದ ಮೀರಾಗೆ ಈಗ ಪ್ರೀತಿಯ ಗಂಡನು ಇಲ್ಲವಾಗಿ ವಿಧವೆಯಾಗುತ್ತಾಳೆ. ಇದಾದ ನಾಲ್ಕೇ ವರ್ಷಗಳಲ್ಲಿ ತಂದೆಯೂ ಯುದ್ಧದಲ್ಲಿ ಮಡಿಯುತ್ತಾನೆ. ಜೀವನದಲ್ಲಿ ದುಃಖ ಬೆಂಬಿಡದೆ ಕಾಡುತ್ತ ಅವಳ ಜೀವನ ಗತಿಯನ್ನು ಬದಲಿಸಿಬಿಡುತ್ತದೆ. ಇದುವರೆಗೂ ಪತಿಯ ಸಾನ್ನಿಧ್ಯದಲ್ಲಿ ಅವಳ ದೈವಭಕ್ತಿ ವಿಕಸಿತಗೊಂಡಿತ್ತು. ಅವಳಿಗೆ ಪೂಜೆಗೆಂದೇ ಪೂಜಾಮಂದಿರ ಕಟ್ಟಿಸಿ ಅವಳಿಗೆ ನಿರಾತಂಕ ವಾತಾವರಣ ನಿರ್ಮಿಸಿ ಕೊಟ್ಟಿದ್ದನು. ಆದರೆ ಗಂಡ, ತಂದೆ, ಕಡೆಗೆ ಮಾವನೂ ತೀರಿಕೊಂಡ ಮೇಲೆ ಅವಳಿಗೆ ಕಿರುಕುಳ ಪ್ರಾರಂಭವಾಗಿತ್ತು. ಪ್ರಕ್ಷುಬ್ಧ ರಾಜಕೀಯ ಧಾರ್ಮಿಕ ವಾತಾವರಣದಲ್ಲಿ ಮೀರಾಳಿಗೆ ಶಾಂತಿ ದೂರವೇ ಆಯಿತು. ಮೀರಾಳ ಮೈದುನ ರಾಣಾ ವಿಕ್ರಮಜಿತ್ ಅವಳಿಗೆ ಕೊಟ್ಟ ಕಷ್ಟಗಳು ಅವಳ ಭಕ್ತಿಯನ್ನು ಮತ್ತೂ ಉತ್ಕಟಗೊಳಿಸಿದವು. ಕೃಷ್ಣಪೂಜೆಯಲ್ಲಿ ಗಾಢವಾಗಿ ಮುಳುಗಿದ ಮೀರಾ ಭಕ್ತಿ ಪರವಶಳಾಗಿ ಗೆಜ್ಜೆಕಟ್ಟಿ ಕುಣಿಯುವುದು, ಸಾರ್ವಜನಿಕ ಮುಂದೆ ಅಪಮಾನವೆಂದು ಮನೆಯವರು ಅಸಮದಾನಗೊಂಡರು.

ಬದುನಿಕ ಎಲ್ಲಾ ವ್ಯಾಮೋಹಗಳನ್ನು ಕಳೆದುಕೊಂಡು ಸಂಪೂರ್ಣ ವೈರಾಗ್ಯ ಹೊಂದಿದ ಮೀರಾಳಲ್ಲಿ ಅಗಾಧ ಬದಲಾವಣೆ ಆಗತೊಡಗಿತ್ತು. ಕೃಷ್ಣನ ಸತತ ಆರಾಧನೆ, ಸಾಧುಸಂತರ ಸೇವೆ, ಧ್ಯಾನ ನರ್ತನಗಳಲ್ಲಿ ಮುಳುಗಿದಳು. ಏಕನಾದ ತಂತಿ ಮಿಡಿಯುತ್ತ ಹಾಡುತ್ತಾ, ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕುಣಿಯುತ್ತ ಕೃಷ್ಣ ದೇವಾಲಯದಲ್ಲಿ ಹಗಲಿರುಳೂ ಭಕ್ತಿಯಲ್ಲಿ ತಲ್ಲೀನಳಾದಳು. ಆಕೆಗೆ ಕೊಟ್ಟ ಕಷ್ಟಗಳು ಅವಳ ಹಾಡುಗಳಲ್ಲಿ ನಿನದಿಸಿದವು. 'ಲೋಕ್ ಕಹ್ಯಾ ಮೀರಾ ಬಾವರಿ, ಸಾಸು ಕಹ್ಯಾ ಕುಲನಾಸೀ ರೀ। ವಿಷ್ ಕೋ ಪ್ಯಾಲಾ ರಾನಾ ಭೇಜ್ಯಾ ಪೀವಾ ಮೀರಾ ಹಾಂಸಿ ರೀ। ರಾಣಜೀ ಥೇ ಜಹರ್ ದಿಯೋ ಮ್ಹೇ ಜಾಣೀ। ಜೈಸೇ ಕಂಚನ್ ದಹತ್ ಅನಲ್ ಮೆ ಸಿರಸತ್ ಬಾರಾಬಾಣೀ। ಲೋಕ್ ರಾಜ್ ಕುಲ್ ಕಾಣಾ ಜಗತ್ ಕೀ ದ ಇ ಬಹಾಇ ಜಸ್ ಪಾಣೀ। 'ಕಾಲಿಗೆ ಗೆಜ್ಜೆ ಕಟ್ಟಿ ನರ್ತಿಸಿದೆ, ಇದನ್ನು ನೋಡಿದವರು ಮೀರಾಳನ್ನು ಹುಚ್ಚ ಅಂದರು, ಅತ್ತೆ ಕುಲನಾಶಿನಿ ಅಂದರು. ರಾಣಾ ವಿಷದ ಬಟ್ಟಲನ್ನು ಕಳಿಸಿದ, ನಾನು ಇದನ್ನು ನಗುನಗುತ್ತಲೇ ಕುಡಿದೆ, ಅದು ವಿಷ ಎಂದು ತಿಳಿದಿದ್ದರೂ ಕುಡಿದೆ. ಆ ವಿಷ ಗಿರಿಧರಲಾಲನಲ್ಲಿಟ್ಟದ್ದ ನನ್ನ ಪ್ರೇಮ ಬೆಳಗುವಂತೆ ಮಾಡಿತು, ಆ ನನ್ನ ಪ್ರೇಮ ಪುಟವಿಟ್ಟ ಚಿನ್ನವಾಯಿತು. ಲೋಕಾಪಮಾನ ಕುಲಾಭಿಮಾನಗಳನ್ನು ಹರಿದುಬಿಟ್ಟೆ' ಹಾಗೆಯೇ 'ಮೀರಾಳನ್ನು ಕೊಲ್ಲಲೆಂದು ಹಾವಿರುವ ಪೆಟ್ಟಿಗೆಯನ್ನು ರಾಣಾ ಕಳುಹಿಸಿದ. ದೈವಾನುಗ್ರಹವುಳ್ಳವರಿಗೆ ಯಾವುದೇ ಕೇಡು ಸಂಭವಿಸುವುದಿಲ್ಲ. 'ಕಾಲಾ ನಾಗ್ ಪಿಟಾರಯಾಂ ಭೇಜ್ಯಾ, ಸಾಲಗ್ರಾಂ ಪಿಛಾಣಾ। ಮೀರಾಂ ತೋ ಅಬ್ ಪ್ರೇಮ್ ದೀವಾಣೀ, ಸಾಂವಲಿಯಾ ವರ್ ಪಾಣಾ। ಕರಿನಾಗರ ಹಾವಿಟ್ಟ ಬುಟ್ಟಿಯ ಮುಚ್ಚಳ ತೆಗೆದಾಗ ಅದರಲ್ಲಿ ಸಾಲಿಗ್ರಾಮದ ಮೂರ್ತಿ ಕಾಣಿಸಿತು. ಆಗ ಮೀರಾ ತನ್ನ ಪ್ರೇಮಾಶ್ರುಗಳಿಂದ ಮಹಾಭಿಷೇಕ ಮಾಡಿದಳು. ಹೀಗೆ ತನಗೆ ಕೊಟ್ಟ ಎಲ್ಲ ಕಷ್ಟಗಳನ್ನು ಮೀರಾ ತನ್ನ ಹಾಡಿನಲ್ಲಿ ಹೇಳಿಕೊಂಡಿದ್ದಾಳೆ. ಮೀರಾಳ ಪ್ರೇಮೋನ್ಮಾದದ ಬಗ್ಗೆ ಅಪಪ್ರಚಾರ ಮಾಡಿ, ಪರಪುರುಷರೊಡನೆ ಪ್ರೇಮಾಲಾಪ ಮಾಡುತ್ತಾ ಅರ್ಧರಾತ್ರಿಯಲ್ಲಿ ದೀಪ ಹಚ್ಚಿಕೊಂಡು ಕುಣಿಯುತ್ತಾಳೆ' ಎಂಬ ಪುಕಾರು ಹುಟ್ಟಿಸಿದ ನಾದಿನಿಯಿಂದ ಪ್ರೇರಿತ ಮೈದುನ ಅವಳ ಪ್ರೇಮಿಯನ್ನು ಕೊಲ್ಲಲೆಂದು ಕೆರಳಿ ಬಂದಾಗ ಇವನೇ ನನ್ನ ಚಿತ್ತಚೋರ, ಪ್ರಾಣ ಧನ ಎಂದು ಗೋಪಾಲನ ಮೂರ್ತಿಯನ್ನು ತೋರಿಸಿದಾಗ ಅವಳನ್ನು ನಾನಾವಿಧವಾಗಿ ಭಂಗಿಸುತ್ತಾನೆ. ಬೇಸತ್ತ ಮೀರಾ ಗೃಹ ತ್ಯಜಿಸಿ ಪ್ರಿಯತಮನನ್ನು ಹುಡುಕುತ್ತ ಅರಮನೆಯಿಂದ ಹೊರಬಂದಾಗ ಜನರು ಅವಳನ್ನು ಮನಬಂದಂತೆ ನಿಂದಿಸಿದ ವರ್ತನೆ ಅಕ್ಕಮಹಾದೇವಿಯ ಜೀವನದೊಡನೆ ಸಾಮ್ಯ ಹೊಂದುತ್ತದೆ.

ಲೋಕದ ಜನರ ನಿಷ್ಠುತ ನುಡಿಗಳಿಗೆ ಅಂಜದೆ, ಎದೆಗುಂದದೇ, ಕಷ್ಟಗಳಿಗೆ ಹೆದರದ, ಮೀರಾ ಕೆಚ್ಚೆದೆಯ ಸಬಲೆಯಾಗಿ ಮಾರ್ಪಡುತ್ತಾಳೆ. 'ನಾನಂತೂ ಪ್ರೇಮೋನ್ಮಾದಿನಿ, ನನ್ನ ನೋವನ್ನು ಯಾರೂ ಅರಿಯರು. ನಾನು ನೋವಿನಿಂದ ಹುಚ್ಚಳಾಗಿದ್ದೇನೆ ಎಂದು ತನ್ನ ದುಃಖವನ್ನು ಹೊರಹಾಕಿದ್ದಾಳೆ. ನಂದಗೋಪಾಲನನ್ನು ಅರಸುತ್ತ ವೃಂದಾವನಕ್ಕೆ ಬಂದು ನೆಲೆಯೂರುತ್ತಾಳೆ. ಅಲ್ಲಿ ಭಕ್ತರು ಕೇಳುವ ಪ್ರಶ್ನೆಗಳು ಅವಳ ಅಭಿಮಾನಕ್ಕೆ ಅನುಭಾವ, ವೈರಾಗ್ಯಕ್ಕೆ ಎಸೆದ ಸವಾಲುಗಳಿವೆ. ದಿಟ್ಟತನದಿಂದ ಅವಳು ಉತ್ತರ ಕೊಟ್ಟ ರೀತಿ ಸ್ತ್ರೀ ಕುಲದ ಗೌರವವನ್ನು ಹೆಚ್ಚಿಸಿದೆ. ಇಷ್ಟದೈವವನ್ನು ಸಾಕ್ಷಾತ್ಕರಿಸಿಕೊಳ್ಳುವ ಹಂಬಲ ಮೀರಾಳಲ್ಲಿ ಮಧುರ ಭಕ್ತಿಯಾಗಿದೆ. ಗಿರಿಧರ ಗೋಪಾಲನೇ ಪತಿಯಾಗಿ 'ಶರಣಸತಿ ಲಿಂಗಪತಿ' ಎಂಬ ಭಾವದಲ್ಲಿ ಸಮರ್ಪಣೆ ಮಾಡಿಕೊಳ್ಳುತ್ತಾಳೆ.

ವೃಂದಾವನದಲ್ಲಿ ಚೈತನ್ಯ ಸಂಪ್ರದಾಯದ ಜೀವ ಗೋಸ್ವಾಮಿಯೂ ಇದ್ದು ಮೀರಾ ಅವರ ದರ್ಶನ ಪಡೆಯಲು ಇಚ್ಛಿಸಿದಳು. ಆದರೆ ಜೀವಗೋಸ್ವಾಮಿ ಸ್ತ್ರೀಯರನ್ನು ನೋಡುವುದಿಲ್ಲ ಎಂಬ ವ್ರತಧಾರಿ. ಮೀರಾಗೆ ತಿಳಿದಾಗ 'ಬೃಂದಾವನದಲ್ಲಿ ಶ್ರೀಕೃಷ್ಣನೊಬ್ಬನೇ ಪುರುಷ,





ಉಳಿದವರೆಲ್ಲಾ ಗೋಪಿಕೆಯರು. ಎಂದು ಆ ಗುರುವಿನ ಪುರುಷನೆಂಬ ಅಭಿಮಾನದ ಬಗ್ಗೆ ಪ್ರಶ್ನಿಸಿ 'ಹೆಣ್ಣಿನ ಮುಖ ನೋಡುವುದು ಪಾಪವೇ' ಎಂದು ಸವಾಲು ಹಾಕಲು ಗೋಸ್ವಾಮಿ ಅಹಂ ತೊರೆದು ಬರಿಗಾಲಲ್ಲಿ ಬಂದು ಮೀರಾಳನ್ನು ಭೇಟಿಯಾಗಿ ಧನ್ಯತೆ ಪಡೆಯುತ್ತಾರೆ. ವೃಂದಾವನದ ಸಾಧು ಸಂತರು ಮೀರಾಳ ಹಿರಿಮೆಯನ್ನು ಕೊಂಡಾಡುತ್ತಾರೆ. ಪ್ರೇಮಗೀತೆಗಳನ್ನು ಹಾಡುತ್ತ ಕೃಷ್ಣನ ಮೂರ್ತಿಯ ಮುಂದೆ ಕೈಯಲ್ಲಿ ಕರತಾಳ ಹಾಕುತ್ತ ನರ್ತಿಸುವ, ಪ್ರೇಮ ದಿವಾನಿ ಮೀರಾಳ ಭಕ್ತಿ ಪರಾಕಾಷ್ಠೆ ಕಂಡು ಕೃಷ್ಣಭಕ್ತರು ಮೀರಾಳನ್ನು ಆರಾಧಿಸುತ್ತ ಆಕೆ ದೈವರೂಪಿಯಾಗುತ್ತಾಳೆ.

ವೃಂದಾವನದಲ್ಲಿ ಮೀರಾ ತನ್ನ ಹಿಂದಿನ ನೋವಿನ ಜೀವನ ಮರೆತು ಕೃಷ್ಣಭಕ್ತೆಯಾಗಿ ವೃಂದಾವನವನ್ನು ಪವಿತ್ರ ಸ್ಥಳವಾಗಿ ರೂಪಿಸುತ್ತಾಳೆ. ಅವಳು ವೃಂದಾವನವನ್ನು ನೆನೆದು, ಹಾಡಿ ತೃಪ್ತಿ ಪಡೆಯಳು. ಅಪರಿಮಿತ ಭಕ್ತಿ, ಮಾಧುರ್ಯ ಭಕ್ತಿ, ನಿರಾಕಾರ ಉಪಾಸನೆ, ವಿನಯಭಾವಗಳ ಮೀರಾ ಗಿರಿಧರನನ್ನು ನಿನ್ನ ಸೇವಕಿಯನ್ನಾಗಿ ನಿನ್ನ ಸೊತ್ತಾಗಿ ಇಟ್ಟುಕೋ, ನಿನ್ನ ಸೇವೆ ಹತ್ತಿರದಲ್ಲಿ ಮಾಡುತ್ತ, ನಿತ್ಯದರ್ಶನ ಲಭಿಸುವಂತೆ ಮಾಡು' ಎಂದು ಬೇಡಿಕೊಳ್ಳುವುದೇ ಪ್ರಮುಖ ಪ್ರಾರ್ಥನೆ ಯಾಗಿದೆ.

ಪರಮಾತ್ಮನ ಸಾಕ್ಷಾತ್ಕಾರ ಕಷ್ಟ. ಅದಕ್ಕೆ ತೀವ್ರ ಸಾಧನೆ ಅಗತ್ಯ. ಕೇಂದ್ರೀಕೃತ ಸಾಧನೆಯಿಂದ ಅದರ ರಹಸ್ಯ ತಿಳಿಯುವುದೂ ಕಷ್ಟ ಎಂತಲೇ 'ತೇರೇ ಮರಮ್ ನಹೀ ಪಾಯೋರೇ' ಎಂದು ಹೇಳುತ್ತಾಳೆ. ಮೀರಾ ಗುರುವಿನ ಮಹತ್ವವನ್ನು, ರಾಮನಾಮವೆಂಬ ಧನವನ್ನು ಸದ್ಗುರು ನನಗೆ ಕೊಟ್ಟಿದ್ದಾನೆ ಎಂದು ಹಾಡಿದ್ದಾಳೆ. ಆಕೆ ದೈವದ ಇರವನ್ನು ಸಗುಣ ಸಾಕಾರ ರೂಪದಲ್ಲಿ ನಿರ್ಗುಣ ನಿರಾಕಾರ ರೂಪದಲ್ಲಿ ಕಂಡು ವರ್ಣಿಸುತ್ತಾಳೆ. 'ಪರತತ್ವವೊಂದೆ ಅವಿನಾಶಿ', 'ಮೀರಾಳ ಪ್ರಭು ಹರಿ ಅವಿನಾಶಿ, ಶಾಶ್ವತ ಅದೃಷ್ಟವಿದ್ದರೆ ಅವನನ್ನು ಪಡೆಯಬಹುದು. ಹೀಗೆ ಮೀರಾಳ ಪರಮಾತ್ಮ ಸರ್ವವ್ಯಾಪಿ. ಆಕೆ ಎಲ್ಲದರಲ್ಲೂ ಅವನನ್ನು ಕಾಣುತ್ತಾಳೆ. ಪರಮಾತ್ಮ ಸುಲಭನಲ್ಲ. ಯೋಗಸಾಧನೆಯಿಂದ ಒಲಿಸಿಕೊಳ್ಳಬೇಕು. ಪರಮಾತ್ಮ ಎಲ್ಲಿಯೂ ಇಲ್ಲ, ನನ್ನಲ್ಲೇ ಇದ್ದಾನೆ ಆತ್ಮನೇ ಪರಮಾತ್ಮ ಎಂಬ ಅದ್ವೈತ ಸ್ಥಿತಿಯನ್ನು ಹೇಳುವ ಅನುಭಾವಿಯಾಗಿ ಪರಮನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಇದಕ್ಕೂ ಮುನ್ನ ಆಕೆ ಪರಮಾತ್ಮನ ವಿರಹದ ಉತ್ಕಟತೆಯಲ್ಲಿ ಹಂಬಲಿಸಿ ವೇದನೆ ಹೊಂದಿದ್ದಾಳೆ. ಹಗಲು ರಾತ್ರಿ ಕಾದಿದ್ದಾಳೆ. ಅವನ ಆಗಮನದ ದಾರಿ ಕಾದಿದ್ದಾಳೆ. ದರ್ಶನ ಆಗದಿದ್ದಾಗ ಅವಳ ಶಾಂತಿ ಕದಡಿದಾಗ ನೆಮ್ಮದಿಯಿಲ್ಲದೆ ಹಗಲು ರಾತ್ರಿ ನಿದ್ದೆಯಿಲ್ಲದೆ ಕಳೆದಿದ್ದಾಳೆ. ಪ್ರಕೃತಿಯ ಪಶು ಪಕ್ಷಿಗಳನ್ನು ಕುರಿತು, ಹಕ್ಕಿಗಳು, ಮೋಡಗಳನ್ನು ಕುರಿತು ಪ್ರಿಯತಮನನ್ನು ಕಂಡಿರಾ ಎಂದು ಕೇಳುವ ಪರಿ ಅಕ್ಕಮಹಾದೇವಿಯ ಸ್ಥಿತಿಯನ್ನು ಹೋಲುತ್ತದೆ.

ಮೀರಾ ಗಿರಿಧರನೊಡನೆ ತನಗೆ ವಿವಾಹವಾದ ವರ್ಣನೆಯನ್ನು ಅದ್ಭುತವಾಗಿ ಹಾಡಿದ್ದಾಳೆ. ಎಂದೆಂದಿಗೂ ಕಳಚದ ವಿವಾಹ ಬಂಧನದಲ್ಲಿ, ಆಧ್ಯಾತ್ಮ ಸಾಮರಸ್ಯದಲ್ಲಿ ಒಂದಾಗಿ ಐವತ್ತಾರು ಕೋಟಿ ದೇವತೆಗಳನ್ನು ಸಾಕ್ಷಿಯಾಗಿಸಿ ಗೋಪಾಲನ ಸತಿಯಾಗುತ್ತಾಳೆ. ವಿವಾಹದ ಸಂಭ್ರಮವನ್ನು ಆನಂದದಿಂದ ವರ್ಣಿಸುವ ಅವಳಲ್ಲಿ ಪರಮಾತ್ಮನೊಡನೆ ಮಿಲನವೇ ಗುರಿ ಎಂಬುದು ಸುಸ್ಪಷ್ಟ ವಾಗಿದೆ. ಕೃಷ್ಣನ ರೂಪ ಲಾವಣ್ಯಗಳನ್ನು 'ಬಸ್ಯಾಂ ಮ್ಹಾರೆ ನೈನನ್ ಮಾಂ ನಂದಲಾಲ್... ಅಧರ್ ಸುಧಾರಸ್ ಮುರುಳ ರಾಜಾ ಏಕ್ ವೈಜಯಂತಿ ಮಾಲ್' ಎಂಬಲ್ಲಿ ಕೃಷ್ಣನ ರೂಪಲಾವಣ್ಯಗಳನ್ನು ಮೀರಾ ವರ್ಣಿಸಿ ಆನಂದಿಸಿದ್ದಾಳೆ.

ಮೀರಾಬಾಯಿ ಬದುಕಿನ ಅಂತ್ಯದಲ್ಲಿ ದ್ವಾರಕೆಯತ್ತ ಹೋಗುತ್ತಾಳೆ. ಅಲ್ಲಿನ ರಣಛೋಡನ ಮೂರ್ತಿಯನ್ನು ಭಾವಪರವಶಳಾಗಿ ಆರಾಧಿಸುತ್ತ, ಹಾಡುತ್ತ, ಹಾಡುತ್ತಲೇ ಲೌಕಿಕ ಜಗತ್ತನ್ನು ಮರೆತು ಕೃಷ್ಣನಲ್ಲಿ ಬೆರೆತು ಐಕ್ಯಳಾಗುತ್ತಾಳೆ. ಪ್ರೇಮ, ಪ್ರೇಮ ಅಮರ ಎಂದು ಜಗತ್ತಿಗೆ ಸಂದೇಶ ನೀಡುವ ಮೀರಾ ಪ್ರೇಮ ಎಂದರೆ ಸಮರ್ಪಣೆ ಎಂಬ ನಿತ್ಯ ಸತ್ಯ ಸಾರಿದ ಆದರ್ಶ ಪ್ರೇಮಿಯಾಗಿ ಪರಮಾತ್ಮನ ಸತಿಯಾಗಿ ಅನುಭಾವದ ಎತ್ತರಕ್ಕೆ ಏರಿದ ಮಹಾಯೋಗಿನಿ. ದಿವ್ಯ ಪ್ರಣಯಿನಿ ಅಮರಪ್ರಭೆ.

*

## ಸರ್ವಜ್ಞ

ಅನ್ನವನು ಇಕ್ಕುವಾ ಅನ್ಯಜಾತನೆ ಕುಲಜ  
ಅನ್ನವನು ಇಕ್ಕದುಣತಿಪ್ಪ, ಕುಲಜಾತ  
ನನ್ಯರೆಂದರಿಯೋ ಸರ್ವಜ್ಞ ।

ದಾನ ಮಾಡುವವರಲ್ಲಿ, ಜಾತಿ-ಕುಜಾತಿ ಎಂಬ ಭೇದ ಭಾವ ಸಲ್ಲ. ಅದರಲ್ಲೂ ಎಲ್ಲಾ ದಾನಕ್ಕಿಂತಲೂ ಅನ್ನದಾನ ಅತಿ ಶ್ರೇಷ್ಠವಾದುದು. ಅಂತಹ ಅನ್ನವನ್ನು ದಾನ ಮಾಡುವ ದಾನಿ ಯಾವ ಜಾತಿಯವನೇ ಆಗಿದ್ದರೂ ಶ್ರೇಷ್ಠನೆಂದೇ ತಿಳಿಯಬೇಕು. ಅನ್ನದಾನ ಮಾಡದೆ, ಸ್ವತಃ ತಾನು ಮಾತ್ರ ತಿಂದು ಬದುಕುವವನು ಸ್ವಜಾತಿ, ಸುಜಾತಿಯವರೆನಿಸಿದ್ದರೂ, ಅಂತಹವನು ಸುಜನ, ಸ್ವಜನ ಎನಿಸಲು ಅರ್ಹನಲ್ಲ.

# ಹಡಪದ ಅಪ್ಪಣ್ಣ

– ಕೆ.ಐ. ಪಾಟೀಲ,

ಬೆಟಗೇರಿ, ಕೇರಾಫ್ ಪಾರೂ ಪ್ರಕಾಶನ, ಸ್ಟೇಷನ್ ರಸ್ತೆ, ಗದಗ –೫೮೨೧೦೧.

ಕಲ್ಯಾಣದ ಅನುಭವ ಮಂಟಪದ ಕಾರ್ಯ ನಿರ್ವಾಹಕನೂ, ಭಕ್ತಿ ಭಂಡಾರಿ ಬಸವನ ಆಪ್ತ ಕಾರ್ಯದರ್ಶಿಯಂತೆಯೂ ಜೀವಿಸಿದ ಹಡಪದ ಅಪ್ಪಣ್ಣನ ಹುಟ್ಟೂರು, ತಂದೆ ತಾಯಿಗಳಾರು ಮತ್ತು ಇತರ ವಿವರಗಳು ಲಭ್ಯವಿಲ್ಲ. ಆತನು ಬಸವಣ್ಣನ ಸಮಕಾಲೀನನಾಗಿದ್ದನೆಂಬುದರಲ್ಲಿ ಎರಡು ಮಾತಿಲ್ಲ. ಬಸವಣ್ಣನ ಸಂಪರ್ಕಕ್ಕೆ ಬರುವ ಪೂರ್ವದಲ್ಲಿ ಆತನು ನಾಪಿತ ಕಾಯಕ ಮಾಡಿಕೊಂಡಿದ್ದನು ಎಂದು ಭಾವಿಸಬಹುದಾಗಿದೆ. ಮುಂದೆ ಬಸವಣ್ಣನ ಸಂಪರ್ಕ ಬಂದ ನಂತರ ಅನುಭವ ಮಂಟಪದ ಸದಸ್ಯನಾಗಿ ಶರಣ ಪಟ್ಟವನ್ನೇರಿದ ಬಳಿಕ ಅನುಭವ ಮಂಟಪದ ಕಾರ್ಯ ಬಾಹುಳ್ಯದ ದೆಸೆಯಿಂದ ಹಡಪದ ವೃತ್ತಿಯನ್ನು ತ್ಯಜಿಸಿರಬೇಕು ಎಂದು ಭಾವಿಸಬಹುದಾಗಿದೆ ಏಕೆಂದರೆ ಜೀವನದಲ್ಲಿ ಆತನು ಹಡಪದ ವೃತ್ತಿಯಲ್ಲಿ ಇದ್ದನು ಎಂಬ ಬಗ್ಗೆ ಪ್ರಸ್ತಾಪ ಬರುವುದಿಲ್ಲ.

ಅಪ್ಪಣ್ಣನೂ ಸಹ ಮಹಾಜ್ಞಾನಿಯಾಗಿದ್ದು ವಚನಗಳನ್ನು ರಚಿಸುವ ಸಾಮರ್ಥ್ಯ ಹೊಂದಿದ್ದನು ಎಂಬುದು ಆತನ ವಚನಗಳನ್ನು ಗಮನಿಸಿದಾಗ ತಿಳಿಯಬಹುದು. ಅಲ್ಲಮ ಪ್ರಭುವು ಶಿವಯೋಗಿ ಸಿದ್ಧರಾಮನ ಜೊತೆಗೂಡಿ ಪ್ರಥಮ ಬಾರಿಗೆ ಕಲ್ಯಾಣಕ್ಕೆ ಬಂದು ಬಸವಣ್ಣನ ಮಹಾಮನೆಗೆ ಆಗಮಿಸಿದಾಗ ಬಸವಣ್ಣ ಶಿವಪೂಜೆಯಲ್ಲಿ ತಲ್ಲೀನನಾಗಿದ್ದನಂತೆ. ತಲೆಬಾಗಿಲಿಗೆ ಬಂದ ಅಪ್ಪಣ್ಣ ವೈರಾಗ್ಯಮೂರ್ತಿ ಅಲ್ಲಮಪ್ರಭುವನ್ನೂ, ಶಿವಯೋಗಿ ಸಿದ್ಧರಾಮನನ್ನೂ ಇದೇ ಪ್ರಥಮ ಬಾರಿಗೆ ನೋಡಿದಾಗ್ಯೂ ಅವರನ್ನು ಅಪ್ಪಣ್ಣ ಗುರ್ತಿಸಿದನಂತೆ. ಜ್ಞಾನಿಗಳಿಗೆ ಜ್ಞಾನಿಗಳ ಸುಳಿವು ತಿಳಿಯುವಂತೆ ತಾನು ಜ್ಞಾನಿಯಾದ ಅಪ್ಪಣ್ಣ ಅವರೇ ಎಂದು ಊಹಿಸಿ ಪೂಜೆಯಲ್ಲಿ ನಿರತನಾದ ಬಸವಣ್ಣನಿಗೆ ಸಮಾಚಾರ ಅರುಹಿದನಂತೆ. ಇಷ್ಟ ಲಿಂಗಾರ್ಚನೆ ತ್ಯಜಿಸಿ ಎದ್ದು ಹೋಗಲಾರದ ಬಸವಣ್ಣ 'ಎನ್ನ ಕಾಯವೇ ಭಕ್ತ ಪ್ರಾಣವೇ ಜಂಗಮವಾದ ಬಳಿಕ ಬೇಧವಿನ್ನೆಲ್ಲಿಯದು, ನೀನೇ ಅವರನ್ನು ಕರೆದು ತಾ' ಎಂದು ಅಪ್ಪಣ್ಣನನ್ನು ಅಟ್ಟಿದನು. ಅದೇ ರೀತಿ ಅಪ್ಪಣ್ಣ ಪ್ರಭುವಿನ ಬಳಿಗೆ ಬಂದು 'ಮನವೇಕಾರ್ಥವಾಗಿ ಕಾಯಕ್ಕೆ ಕಾಯ ಸಂಬಂಧವಾಗಿ ಪ್ರಾಣಕ್ಕೆ ಪ್ರಾಣ ಸಮದರುಶನವಾಗಿದ್ದವರಲಿ ತೆರೆಮರೆ ಇಲ್ಲ ನೋಡಯ್ಯ' ಎಂದುಸುರಿ ಒಳಗೆ ಬರಲು ಭಿನ್ನವಿಸುವನು. ಅದಕ್ಕೆ ಪ್ರಭು 'ಅನಾಗದ ಮುನ್ನ ತಾನಾದವರೆಂಬರಲ್ಲಿಗೆ ಗುಹೇಶ್ವರ ಲಿಂಗ ಅಡಿಯಿಡುವುದಿಲ್ಲ' ವೆಂದು ನಿಷ್ಠುರವಾಗಿ ನುಡಿದುಬಿಟ್ಟರು.

ಮುಂದೆ ಅಪ್ಪಣ್ಣ ಮತ್ತು ಪ್ರಭುವಿನ ಮಧ್ಯೆ ಸ್ವಾರಸ್ಯಕರ ಚರ್ಚೆ ನಡೆದು ಕೊನೆಯಲ್ಲಿ ಅಪ್ಪಣ್ಣನು ನಿಮ್ಮ ಶರಣರ ಮನೆಯ ಸಲಿಗೆಯ ಬಂಟನಾನಲ್ಲಯ್ಯ ತನು, ಮನ, ಧನ ಹಿಂದಿಕ್ಕಿಕೊಂಡ ವಂಚಕ ನಾನಯ್ಯ ಎನ್ನುತ್ತಾ ಬಸವಣ್ಣನಲ್ಲಿಗೆ ತೆರಳಿ ನಿಮ್ಮ ಶರಣರು ಎನ್ನಿಚ್ಚೆಗೆ ಒಪ್ಪರೆ? ಎನ್ನ ನುಡಿ ಶರಣರನ್ನು ತಾಗಬಲ್ಲದೆ? ಹಣೆಯ ಹೊಣೆ ತೋರಿ ಉದರವ ಹೊರೆವ ನಿಮ್ಮ ಮರೆಯಲಡಗಿಪ್ಪ ಹಡಪಿಗ ನಾನಯ್ಯ ಎಂದು ಭಿನ್ನವಿಸಿಕೊಳ್ಳುತ್ತಾನೆ. ಇದನ್ನು ಕೇಳಿದ ಪ್ರಭುದೇವರಂತೂ ಅವಕ್ಕಾಗುತ್ತಾರೆ. ಈತನು ಹಡಪಿಗನೇ. ಎಂಥ ಪಾಂಡಿತ್ಯ ಈತನದು. ಸಕಲ ವೇದಗಳ ಸಾರವನ್ನೂ ಪಾರಮಾರ್ಥದ ನಿಲುವನ್ನೂ ತನ್ನ ವಚನಗಳಲ್ಲಿ ಉದ್ಧರಿಸುವ ಈತ ಸಾಮಾನ್ಯ ಜ್ಞಾನಿಯಲ್ಲ ಎಂದು ಉದ್ಗಾರ ತೆಗೆಯುತ್ತಾರೆ. ಸಂಗಡವೇ ಬಂದಿದ್ದ ಸಿದ್ಧರಾಮನಿಗೆ ಕಂಡೆಯಾ ಬಸವಣ್ಣನ ಒಡನಾಡಿಗಳ ಜ್ಞಾನದ ಪರಿಯನ್ನು ಮತ್ತು ಹರವನ್ನು ಎಂದು ಸೂಚ್ಯವಾಗಿ ಹೇಳುತ್ತಾರೆ.

ಇಂಥ ಮಹಾಜ್ಞಾನಿ ಅಪ್ಪಣ್ಣನ ಮಡದಿ ಲಿಂಗಮ್ಮ ಸಹ ಆಧ್ಯಾತ್ಮದಲ್ಲಿ ಬೆಳ್ಳಿ ಚುಕ್ಕಿಯಂತೆ ಬೆಳಗುತ್ತಿದ್ದಳು. ಆಕೆಯೂ ಸಹ ವಚನಕಾರ್ತಿಯಾಗಿ ಅನೇಕ ವಚನಗಳನ್ನು ರಚಿಸಿದ್ದಾಳೆ. ಆಕೆಯ ವಚನಗಳ ಅಂಕಿತ ಅಪ್ಪಣ್ಣಪ್ರಿಯ ಚನ್ನಬಸವಣ್ಣ ಎಂಬುದಾಗಿತ್ತು. ಅಪ್ಪಣ್ಣನಿಗೂ ಮತ್ತು ಲಿಂಗಮ್ಮನಿಗೂ ಗುರುದೀಕ್ಷೆ ನೀಡಿದವರು ಚನ್ನಮಲ್ಲೇಶ್ವರ ಎಂದು ತಿಳಿದು ಬರುತ್ತದೆ. ಇಂಥ ಉಜ್ವಲ ಶರಣರಿಗೆ ದೀಕ್ಷೆ ನೀಡಿದಾತನು ಮಹಾನುಭಾವನೇ ಆಗಿರಬೇಕು ಎಂದು ಊಹಿಸಬಹುದಾಗಿದೆ ಏಕೆಂದರೆ ಶರಣ ಸಾಹಿತ್ಯದಲ್ಲಿ ಈ ಚನ್ನಮಲ್ಲೇಶ್ವರ ಬಗೆಗೆ ವಿವರಗಳು ತಿಳಿದು ಬಂದಿಲ್ಲ.

ಅಪ್ಪಣ್ಣನು ಬಸವಣ್ಣನವರ ಆಪ್ತ ಕಾರ್ಯದರ್ಶಿಯಂತೆಯೂ ಮತ್ತು ಅನುಭವ ಮಂಟಪದ ಸಂಚಾಲಕನಂತೆಯೂ ಕಾರ್ಯ ನಿರ್ವಹಿಸುತ್ತಿದ್ದುದನ್ನು ಈ ಮೊದಲೇ ಹೇಳಲಾಗಿದೆ. ಬಸವಣ್ಣನು ಉದಯ ಕಾಲದಲ್ಲಿ ಎದ್ದ ಕೂಡಲೇ ಆತನಿಗೆ ಮುಖಮಜ್ಜನಕ್ಕೆ ನೀರು ಕೊಡುವುದರಿಂದ ಹಿಡಿದು ಆತನು ಶಯನಕ್ಕೆ ಹೋಗುವವರೆಗೆ ಆತನ ನೆರಳಿನಂತೆ ಪ್ರತಿಯೊಂದು ಕಾರ್ಯದಲ್ಲಿಯೂ ಸಹಕಾರಿಯಾಗಿದ್ದನು. ಆತನು ಮಹಾಮನೆಗೆ ಆಗಮಿಸುವ ಅತಿಥಿ ಅಭ್ಯಾಗತರ ಯೋಗಕ್ಷೇಮದ ಹೊಣೆ ಅಪ್ಪಣ್ಣನದೇ ಇದಾದ ನಂತರ

ಅನುಭವ ಮಂಟಪದ ಕಾರ್ಯಕ್ರಮಗಳನ್ನು ಚೊಕ್ಕಟವಾಗಿ ನಿರ್ವಹಿಸುವ ಜವಾಬ್ದಾರಿಯೂ ಆತನದೇ, ಹೀಗೆ ಕಲ್ಯಾಣದ ಶರಣರ ಪ್ರತಿಯೊಂದು ಕಾರ್ಯ ಚಟುವಟಿಕೆಗಳೂ ಅಪ್ಪಣ್ಣನ ಆಶಯದಂತೆಯೇ ರೂಪುಗೊಳ್ಳುತ್ತಿದ್ದವು. ಇಂಥ ಅಪ್ಪಣ್ಣನ ಅಭಿಮಾನ ಪಾತ್ರರಾದಾವರೆಂದರೆ ಭಕ್ತಿ ಭಂಡಾರಿ ಬಸವಣ್ಣ ಮತ್ತು ಪರಮಜ್ಞಾನಿ ಚನ್ನಬಸವಣ್ಣ.

ಮಧುವಯ್ಯ ಮತ್ತು ಹರಳಯ್ಯ ಇವರು ಮಕ್ಕಳನ್ನು ವಿಲೋಮ ವಿವಾಹದಲ್ಲಿ ಮದುವೆ ಮಾಡಿದ ಕಾರಣ ದೊರೆ ಬಿಜ್ಜಳನು ಆ ಇಬ್ಬರಿಗೂ ಶರಣರಿಗೆ ಮರಣ ದಂಡನೆ ವಿಧಿಸಿದ ನಂತರ ಇದನ್ನು ಪ್ರತಿಭಟಿಸಿದ ಬಸವಣ್ಣ ತನ್ನ ಮಾತಿನಂತೆ ಪ್ರಧಾನಿ ಹುದ್ದೆಯನ್ನು ತ್ಯಜಿಸಿ ಕಲ್ಯಾಣದಲ್ಲಿ ನಿಲ್ಲದೇ ತನ್ನ ಆಧಿದೈವ ಕೂಡಲ ಸಂಗಮಕ್ಕೆ ನಿರ್ಗಮಿಸಿದಾಗ ಬಸವಣ್ಣನ ಜೊತೆಗೆ ಹಡಪದ ಅಪ್ಪಣ್ಣನೂ ತೆರಳಿದನು. ಕೂಡಲ ಸಂಗಮ ಕ್ಷೇತ್ರವನ್ನು ತಲುಪಿದ ನಂತರ ಬಸವಣ್ಣ ತನ್ನ ಪತ್ನಿಯರಾದ ಗಂಗಾಂಬಿಕೆ ಮತ್ತು ನೀಲಾಂಬಿಕೆಯರನ್ನೂ ಸಂಗಮಕ್ಕೆ ಕರೆತರುವಂತೆ ಹೇಳಿ ಕಳಿಸಿದನು. ಲಿಂಗಪ್ರಾಣಿಯಾದ ನೀಲಾಂಬಿಕೆ ಅಪ್ಪಣ್ಣನ ಜತೆ ತೆರಳಲು ಒಪ್ಪಿ ಆತನ ಜೊತೆ ಸಂಗಮಕ್ಕೆ ನಡೆದರೆ ಗುರುಪ್ರಾಣಿಯಾದ ಗಂಗಾಂಬಿಕೆಯೂ ಗುರು ರುದ್ರಮುನಿಯ ಅಣತಿಯಂತೆ ಕಲ್ಯಾಣ ವನ್ನು ತೊರೆದು ಉಳವಿಗೆ ಹೋಗಿದ್ದು ಶರಣ ಸಮುದಾಯದ ಜೊತೆ ಸೇರಿಕೊಂಡು ಶರಣ ಧರ್ಮದ ಮತ್ತು ಶರಣ ಸಾಹಿತ್ಯದ ರಕ್ಷಣೆಗಾಗಿ ಅತ್ತ ನಡೆದಳು. ಇತ್ತ ಅಪ್ಪಣ್ಣನ ಜೊತೆ ಕೂಡಲ ಸಂಗಮಕ್ಕೆ ನಡೆದ ನೀಲಾಂಬಿಕೆ ಅವರಿಬ್ಬರೂ ತಂಗಡಿಗೆ ತಲುಪಿದ ಸಮಯಕ್ಕೆ ಬಸವಣ್ಣನವರು ಕೂಡಲ ಸಂಗಮದಲ್ಲಿ ಐಕ್ಯರಾದ ಸಮಾಚಾರ ತಲುಪಿತು. ಪತಿಯ ಅಂತಿಮ ದರ್ಶನದಿಂದ ವಂಚಿತಳಾದ ನೀಲಮ್ಮ ದುಃಖಿತಪ್ತ ಳಾಗಿ ಅಲ್ಲಿಯೇ ನದಿಯ ದಂಡೆಯ ಮೇಲೆ ಒಂದು ಮರದ ಬುಡದಲ್ಲಿ ಕುಳಿತು ತನ್ನ ಇಷ್ಟಲಿಂಗ ಪೂಜಿಸುತ್ತ ಅದರಲ್ಲಿಯೇ ಐಕ್ಯಳಾಗಿ ಬಿಡುತ್ತಾಳೆ.

ತಾಯಿಯನ್ನು ಕಳೆದುಕೊಂಡ ಕರುವಿನಂತಾದ ಅಪ್ಪಣ್ಣನೂ ಸ್ವಲ್ಪ ದೂರದಲ್ಲಿಯೇ ತಾನೂ ತನ್ನ ಇಷ್ಟಲಿಂಗ ಪೂಜಿಸುತ್ತ ಲಿಂಗದಲ್ಲಿ ಐಕ್ಯನಾಗಿ ಬಿಡುತ್ತಾನೆ. ತಂಗಡಗಿ ಗ್ರಾಮ ವಾಸಿಗಳು ಈ ಶರಣ-ಶರಣೆಯ ಜ್ಞಾಪಕಾರ್ಥ ಅವರು ಐಕ್ಯವಾದ ಸ್ಥಳದಲ್ಲಿಯೇ ಇಬ್ಬರಿಗೂ ಒಂದೊಂದು ದೇವಾಲಯ ನಿರ್ಮಿಸಿದ್ದಾರೆ.

ಅಪ್ಪಣ್ಣ ಸುಮಾರು 250 ವಚನಗಳನ್ನು ರಚಿಸಿರುವ ಅಂದಾಜಿದ್ದು ಆತನ ಅಂಕಿತ 'ಬಸವಪ್ರಿಯ ಕೂಡಲ ಚನ್ನಸಂಗಮದೇವ'.

*

## ವಿಜ್ಞಾನಿಗಳ ದೃಷ್ಟಿಯಲ್ಲಿ ಬ್ರಹ್ಮಾಂಡ

### ಸೃಷ್ಟಿಯ ಮೂಲಸ್ವರೂಪ

–ಚೆನ್ನಬಸವಾನಂದ ಸ್ವಾಮೀಜಿ

ವಿಜ್ಞಾನಿಗಳ ಪ್ರಕಾರ ಅನಂತ ಕೋಟಿ ವರ್ಷಗಳ ಹಿಂದೆ ತೋರುವ ಅನಂತ ಬ್ರಹ್ಮಾಂಡಂಗಳಾಗಲಿ, ಅನಂತ ಸಚರಾಚರಂಗಳಾಗಲಿ ಇರದೆ ಸೃಷ್ಟಿಯ ಪೂರ್ವದಲ್ಲಿ ಅಗ್ನಿ ಮಯವಾದ ಬಯಲಿನಲ್ಲಿ ಪರಮಾಣುಗಳ ಸಮೂಹ ತುಂಬಿತ್ತು. ನಂತರ ಪರಮಾಣುಗಳ ಒಟ್ಟುಗೂಡುವಿಕೆಯಿಂದ ಅನಂತ ತಾರಾಮಂಡಲ ಸೃಷ್ಟಿಯಾಯಿತು ಎಂದು ಹೇಳುತ್ತಾರೆ. ಸುಪ್ರಸಿದ್ಧ ಭೌತವಿಜ್ಞಾನಿ ಸ್ಟಿಫನ್ ಹಾಕಿಂಗ್ ಹೇಳುತ್ತಾರೆ. 'ಒಂದಾನೊಂದು ಕಾಲಕ್ಕೆ ಈ ತೋರುವ ಅನಂತ ಬ್ರಹ್ಮಾಂಡಗಳೆಲ್ಲಾ ಅಳಿದು ಬಟ್ಟ ಬಯಲಾಗುತ್ತವೆ' ಎನ್ನುತ್ತಾರೆ. ಹಾಗಾದರೆ ಈ ಸೃಷ್ಟಿಯ ಮೂಲ ಸ್ವರೂಪ ಬಯಲು ಶೂನ್ಯ. ಬಯಲೆಂದರೆ ಏನೂ ಇಲ್ಲದ ಖಾಲಿ ಬಯಲಲ್ಲ ಎಲ್ಲವನ್ನು ಗರ್ಭೀಕರಿಸಿಕೊಂಡಿರುವ ಪರಮ ಬಯಲು ಅದಕ್ಕೆ ಶರಣರು ಶೂನ್ಯ ಸಂಪಾದನೆ ಮಾಡಿಕೊಳ್ಳಬೇಕೆಂದು ಹೇಳುತ್ತಾರೆ. ಶಿವಯೋಗಿಯ ದೇಹ ಬಿದ್ದಡಿಂದ ಹೊಡೆದರು ಬಯಲಿಗೆ ಹೊಡೆದಂತಾಗುತ್ತದೆ. 'ಆಡಬಾರದ ಬಯಲು ನೋಡಬಾರದ ಬಯಲು ನುಡಿಯಬಾರದ ಬಯಲು ಹಿಡಿಯಬಾರದ ಬಯಲು ಒಡಲಿಲ್ಲದ ಬಯಲೊಳಗೆ ಅಡಗಿರ್ದ ಭೇದವ ಮೃಡರೆತ್ತ ಬಲ್ಲರೈ ರಾಮನಾಥ' ಎನ್ನುತ್ತಾರೆ.

ವಿಜ್ಞಾನಿಗಳ ಅಭಿಪ್ರಾಯದಂತೆ ಶರಣರು ನೂರಾರು ವಚನಗಳಲ್ಲಿ ಸೃಷ್ಟಿಯ ಮೂಲ ಸ್ವರೂಪದ ಬಗ್ಗೆ ಸ್ಪಷ್ಟವಾಗಿ ಹೇಳುತ್ತಾರೆ. ಆ ವಚನಗಳಲ್ಲಿ ಅರ್ಥ ಮಾಡಿಕೊಳ್ಳುವ ಜ್ಞಾನ ಬೇಕು. ಪರವಸ್ತುವು ಸೃಷ್ಟಿ ಪೂರ್ವಕ್ಕಿಂತ ಮೊದಲು ನಿರಾಕಾರವಾಗಿ ನಿರವಯವಾಗಿ ನಿರ್ಮಳವಾಗಿ ನಿರ್ಗುಣವಾಗಿ ನಿರ್ಮಾಯವಾಗಿ ನಿತ್ಯ ನಿರಂಜನವಾಗಿ ಸರ್ವಶೂನ್ಯ ವಾಗಿ ಇದ್ದಿತ್ತು. ಇದಕ್ಕೆ ಶರಣರ ವಚನಂಗಳು.

*ಏನೂ ಏನೂ ಇಲ್ಲದ ಬಯಲೊಳಗೊಂದು*
*ಬಗೆಗೊಳಗಾದ ಬಣ್ಣ ತಲೆದೋರಿತ್ತು.*
*ಆ ಬಣ್ಣವು ಆ ಬಯಲ ಶೃಂಗರಿಸಲು*
*ಬಯಲು ಸ್ವರೂಪಾಗೊಂಡಿತ್ತು.*
*ಅಂತಪ್ಪ ಸ್ವರೂಪಿನ ಬೆಡಗು ತಾನೆ*
*ನಮ್ಮ ಗುಹೇಶ್ವರ ಲಿಂಗದ ಪ್ರಥಮ ಚಿತ್ತಿ.*

*ನಿರವಯಂ ನಿರಾಮಯಂ ನಿರಾಕುಳಂ.*
*ನಿರ್ದ್ವಂದ್ವಂ ನಿರ್ಮಳ ನಿಜಸ್ವರೂಪಂ. ನಿರ್ಭಾವ ನೀಪುರುಷ ನಿರಂಜನ ನಿರಾಕಾರಂ. ನಿರಾವರಣ ನಿರುಪಮ ನಿರ್ಗುಣ ನಿರಾಧಾರ ನಿರಾಲಂಬಂ. ಸರ್ವಾಧಾರ ಸದಾಶಿವಂ ಅತ್ಯತಿಷ್ಠದ್ದಶಾಂಗುಲಂ ನಿತ್ಯನಿಶ್ಚಿಂತಂ ನಿರ್ಮಲ ನಿರ್ಮಾಯ ನಿರಾಳಕಂ ಹರ ಹರಾ ಶಿವ ಶಿವಾ ಜಯ ಜಯ ಜಯತು ಶರಣ ಕರುಣಾಕರ ತ್ರಾಹಿಮಾಂ ಭಕ್ತವತ್ಸಲ ಮತ್ತ್ರಾಣನಾಥ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.*





## ಹೊನ್ನಡಿಕೆಯ ಚಿನ್ನ ಇನ್ನಿಲ್ಲ

ಶ್ರೀ ಹೆಚ್.ವಿ. ಮಹಾರುದ್ರಶೆಟ್ಟಿ

ಸರಳ ಸಜ್ಜನಿಕೆಗೆ ಸಾಕಾರವಾಗಿದ್ದರು. ನಿಸರ್ಗಕ್ಕೆ ಗಿರಿ ಯೆನಿಸಿದ್ದರು. ಕಲೆಯ ಉಪಾಸನೆಯಲ್ಲಿ ಕೊನೆತನಕ ನಡೆದು ಬಂದರು. ಶರಣತತ್ವ ಪ್ರೇಮಿಗಳಾಗಿ ಪರಿಮಳಿ ಸುತ್ತಿದ್ದರು. ಪ್ರತಿಷ್ಠಿತ ಪ್ರಶಸ್ತಿ ಪುರಸ್ಕೃತರಾಗಿದ್ದು ಪ್ರಚಾರಕ್ಕೆ ಆಶಿಸದೆ ಪ್ರಸನ್ನ ಚಿತ್ತಶಾಂತರಾಗಿ 'ಎಲ್ಲರೊಳಗೊಂದಾಗಿ' ಬಾಳಿದರು. ಚಲನಚಿತ್ರರಂಗದ ಶ್ರೀಮಂತ ಕಲಾನುಭವಿಗಳಾಗಿ ಕಲಾ ದಿಗ್ಗಜರ ಒಡನಾಡಿಯಾಗಿ ಎತ್ತರಕ್ಕೆ ಬೆಳೆದು ಬಂದರೂ ಹಳ್ಳಿಯ ಮುಗ್ಧತೆಯನ್ನು ಕಳೆದುಕೊಳ್ಳದ ಅವರು ಅಪರೂಪದ 'ಚಿನ್ನ' ವೆನಿಸಿದ್ದು ಇನ್ನು ಕೇವಲ ನೆನಪು ಮಾತ್ರ.

ಲಿಂಗೈಕ್ಯ ಹೆಚ್.ವಿ. ಮಹಾರುದ್ರಶೆಟ್ಟಿಯವರು ದಿನಾಂಕ ೦೭-೦೮-೧೯೩೭ರಲ್ಲಿ ತುಮಕೂರು ತಾಲ್ಲೂಕು ಹೊನ್ನುಡಿಕೆ ಗ್ರಾಮದಲ್ಲಿ ಹುಟ್ಟಿದರು. ಪ್ರಥಮಿಕ ವಿದ್ಯಾಭ್ಯಾಸ ವನ್ನು ಸ್ವಗ್ರಾಮದಲ್ಲಿಯೇ ಮುಗಿಸಿದರು. ಕಲಾವ್ಯಾಸಂಗ ಕಾಂಕ್ಷಿಗಳಾದ ಶ್ರೀ ಶೆಟ್ಟಿಯವರು ಉನ್ನತ ಕಲಾ ಶಿಕ್ಷಣಕ್ಕಾಗಿ ಮೈಸೂರಿನಲ್ಲಿ ಚಾಮರಾಜೇಂದ್ರ ಟೆಕ್ನಿಕಲ್ ಇನ್ಸಿಟ್ಯೂಟ್ ಡ್ರಾಯಿಂಗ್ ಮತ್ತು ಪೈಂಟಿಂಗ್ ತರಬೇತಿ, ಮದ್ರಾಸಿನಲ್ಲಿ ಡ್ರಾಯಿಂಗ್ ಮತ್ತು ಪೈಂಟಿಂಗ್ ಪರೀಕ್ಷೆ, ಮುಂಬಯಿಯ ಸರ್.ಜೆ.ಜೆ. ಸ್ಕೂಲ್ ಆಫ್ ಆರ್ಟ್ ಶಾಲೆಯಲ್ಲಿ ಗವರ್ನಮೆಂಟ್ ಡಿಪ್ಲೊಮೊ ಪಡೆದರು. ವ್ಯಾಸಂಗ ಮುಗಿದ ಕೂಡಲೇ ಹಿಂದಿ ಸಿನಿಮಾಗಳಲ್ಲಿ ಕಲಾ ನಿರ್ದೇಶಕರಾಗಿ, ಟಿ.ವಿ. ಸೀರಿಯಲ್‌ಗಳಿಗೆ ಕಲಾ ನಿರ್ದೇಶಕರಾಗಿ, ವೃತ್ತಿ ಜೀವನವನ್ನು ಆರಂಭಿಸಿದರು. ೨೯ ಹಿಂದಿ ಸಿನಿಮಾಗಳಲ್ಲಿ ೬ ಸೀರಿಯಲ್‌ಗಳಲ್ಲಿ ಹತ್ತಾರು ಇಂಟೀರಿಯರ್ ಡೆಕೋರೇಷನ್‌ಗಳಲ್ಲಿ ದಣಿವರಿಯದೆ ದುಡಿದು ಧೀಮಂತರೆನಿಸಿದರು. ೧೯೬೫ರಲ್ಲಿ ನಡೆದ ಫಿಲಂ ಎಕ್ಸ್‌ಪೋ ಪ್ರದರ್ಶನದಲ್ಲಿ ಮಿಚಲ್ ಕೆಮರಾ ಎಫೆಕ್ಟ್‌ಗಳ ೨೫ ಅಡಿ ಎತ್ತರದ ಲೆನ್ಸಿನಿಂದ ಜನರು ಬರುವ ವ್ಯವಸ್ಥೆಯನ್ನು ಮಾಡಿದ ಕೀರ್ತಿ ಶ್ರೀಮಹಾರುದ್ರ ಶೆಟ್ಟಿಯವರದಾಗಿತ್ತು. ಶ್ರೀಯುತರು ತಯಾರಿಸಿದ ಆದಿಮಾನವ ಗೊಂಬೆಗಳು ಲಂಡನ್ ನೆಹರೂ ಸೆಂಟರ್ ವಿಜ್ಞಾನ ಪ್ರದರ್ಶನದಲ್ಲಿ ಸಾವಿರಾರು ಪ್ರೇಕ್ಷಕರ ಹೃನ್ಮನವನ್ನು ಸೂರೆಗೊಂಡವು. ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯ, ಮೆಹೆಂಜಾದಾರೋದ ಲೋಥಲ್ ಸಂಸ್ಕೃತಿಯ ಚಿತ್ರಣ ಜನಮನ್ನಣೆಗೆ ಪಾತ್ರ ವಾದುವು. ಭಾರತೀಯ ಆಯುರ್ವೇದ ಪದ್ಧತಿಯ ಚಿಕಿತ್ಸೆಗೆ ಸಂಬಂಧಿಸಿದ ಮಾಡೆಲ್‌ಗಳನ್ನು ಪ್ರದರ್ಶಿಸಿದ ಯಶಸ್ಸು ಶ್ರೀ ಶೆಟ್ಟಿಯವರದು. ಭಕ್ತಮಾರ್ಕಂಡೇಯ ಗೊಂಬೆ ನಾಟಕದ ಡಾಕ್ಯುಮೆಂಟರಿ ನಾಗಿ ಭಾರತ ಸರ್ಕಾರಕ್ಕೆ ಪ್ರದರ್ಶನಾರ್ಥ ಸಿದ್ಧಗೊಳಿಸಿದರು.

ಶ್ರೀ ಮಹಾರುದ್ರಶೆಟ್ಟಿಯವರಿಗೆ ೨೦೦೩ ರಲ್ಲಿ ದಾದಾ ಸಾಹೇಬ್ ಫಾಲ್ಕೆ ಅಕಾಡೆಮಿ ಪ್ರಶಸ್ತಿಯನ್ನಿತ್ತು ಗೌರವಿಸ ಲಾಯಿತು. ಶ್ರೀಯುತರ ಕಲಾಶ್ರೀಗೆ ಕಿರೀಟವನ್ನಿಂ ಟಂತಾಯಿತು. ಹೊನ್ನುಡಿಕೆಯ ಚಿನ್ನಕ್ಕೆ ಸಂದ ಸನ್ಮಾನವೆನಿಸಿತು.

ಶ್ರೀಯುತರಿಗೆ ಒಂದು ದೊಡ್ಡ ಕನಸಿತ್ತು. ಶ್ರೀ ಸಿದ್ಧಗಂಗಾ ಮಠದ ಬೆಟ್ಟದ ಮೇಲೆ ಶ್ರೀ ಸಿದ್ಧಲಿಂಗೇಶ್ವರರ ೨೫೦ ಅಡಿಗಳ ಎತ್ತರದ ಬೃಹತ್ ಮೂರ್ತಿಯನ್ನು ಸಿಮೆಂಟಿನಲ್ಲಿ ಸಿದ್ಧಗೊಳಿಸಿ ಪ್ರದರ್ಶಿಸಬೇಕೆಂಬುದಾಗಿತ್ತು. ಅದರ ಮಾಡೆಲ್‌ನ್ನು ಸಿದ್ಧಪಡಿಸಿ ಶ್ರೀಮಠದ ಮುಂದಿರಿಸಿದ್ದು ಎಲ್ಲರ ಕಣ್ಮನಗಳನ್ನು ತುಂಬುತ್ತಿವೆ. ಶ್ರೀಯುತರ ಕನಸನ್ನು ನನಸಾಗಿಸುವ ಸಂಕಲ್ಪ ಭಕ್ತಾದಿಗಳದ್ದಾಗಿದೆ. ಅದೇ ಅವರಿಗೆ ಅಭಿಮಾನಿಗಳು ಅರ್ಪಿಸಬಹುದಾದ ನಿಜವಾದ ಶ್ರದ್ಧಾಂಜಲಿ ಎಂದು 'ಸಿದ್ಧಗಂಗಾ' ಭಾವಿಸುತ್ತದೆ. ಶ್ರೀಮಹಾರುದ್ರ ಶೆಟ್ಟಿಯವರ ಯಶಸ್ಸಿಗಾಗಿ ಬಾಳಿನುದ್ದಕ್ಕೂ ಸಹಕರಿಸುತ್ತ ಹೆಜ್ಜೆ ಹಾಕಿದ ಧರ್ಮಪತ್ನಿ ಶ್ರೀಮತಿ ಸರಳಾ ಮತ್ತು ಕುಟುಂಬದ ವರ್ಗದವರಿಗೆ, ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲೆಂದು ಆಶಿಸುತ್ತ, ಲಿಂಗೈಕ್ಯರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.



## ಕಾಯಿಲೆಯ ಕಥೆ - ಜೀವಿ V/S ಜೀವಿರೋಧಕ

– ಮುಂದುವರೆದ ಭಾಗ

### ಏಕಂ ರೋಗಂ ಜನಾಃ ಬಹುಧಾ ವದಂತಿ

–ಜಿ.ವಿ.ವಿ. ಶಾಸ್ತ್ರಿ
'ನಿಸರ್ಗ ಯೋಗಧಾಮ' ನಂ. ೨/೨೦೫೪, ೧೧ನೇ ಕ್ರಾಸ್,
ಎಸ್.ಎಸ್.ಪುರಂ, ತುಮಕೂರು –೫೭೨ ೧೦೨. ದೂರವಾಣಿ : (೦೮೧೬) ೨೨೭೮೪೫

**ಜೀವಿ V/S ಜೀವಿವಿರೋಧಕ :**

ಆಕಸ್ಮಿಕ ! ಬಹಳಷ್ಟು ವೈಜ್ಞಾನಿಕ ಸಂಶೋಧನೆಗಳು ಆಕಸ್ಮಿಕಗಳೇ. ಅಲೆಕ್ಸಾಂಡರ್ ಫ್ಲೇಮಿಂಗ್ ಬೂಸ್ಟಿನಲ್ಲಿ ರೋಗಾಣುಗಳು ಬೆಳೆಯದಿದ್ದುದನ್ನು ಗಮನಿಸಿದ. ಇದರಿಂದ ಪೆನ್ಸಿಲಿನ್ ಹುಟ್ಟಿತು. ಇನ್ನು ಭೂಮಿಯಿಂದ ಬ್ಯಾಕ್ಟೀರಿಯಾಗಳು, ವೈರಸ್‌ಗಳು, ನಿರ್ನಾಮವಾಗುವುದು ಖಂಡಿತವೆಂದು ಅಂದುಕೊಂಡಿತು. ಈ ಜಗತ್ತು, ಪೆನ್ಸಿಲಿನ್‌ನ ಹಿಂದೆಯೇ ಒಂದರಿಂದ ಒಂದರಂತೆ ಜೀವಿರೋಧಕಗಳು ಮಾರುಕಟ್ಟೆಗೆ ಲಗ್ಗೆ ಹಾಕಿದವು. ಈಗ ಎಲ್ಲದಕ್ಕೂ ಆ್ಯಂಟಿಬಯೋಟಿಕ್.

'ಸೀತೆ ಸೀನಿದರೂ, ಭಾಮೆ ಬಿಕ್ಕಳಿಸಿದರೂ ಅಜ್ಜಿ ಆಕಳಿಸಿದರೂ ಆ್ಯಂಟಿಬಯೋಟಿಕ್ ಪ್ರಯೋಗ. ಮೋಹಿನಿಯ ಮೊಡವೆ ಅಡಗಿಸಲು, ಕಾವ್ಯಳ ಕಂಠಸಿರಿ ಹೆಚ್ಚಿಸಲು, ಕೋಮಲೆಯ ಸೊಂಟ ನೋವು ಸುಧಾರಿಸಲು ಆ್ಯಂಟಿ ಬಯೋಟಿಕ್‌ನ ಆಟಂಬಾಂಬನ್ನೇ ಹಾಕಬೇಕು'– ಡಾ. ಅನಿಲ್‌ಕಮತಿ, ('ಆರೋಗ್ಯಕ್ಷೇತ್ರದಲ್ಲಿ ಆತಂಕಕಾರಿ ಬೆಳವಣಿಗೆಗಳು' ಎಂಬ ಲೇಖನದಿಂದ. ತರಂಗ, ಡಿಸೆಂಬರ್ 1993).

ಯುದ್ಧದ ಬಗ್ಗೆ ಒಂದು ಜಾಣ ನುಡಿಯಿದೆ. ಶತ್ರುವಿನ ಮೇಲೆ ಸದಾ ಯುದ್ಧ ಸಾರಬೇಡ. ಹಾಗೆ ಮಾಡಿದರೆ ಅವನು ಅದಕ್ಕೆ ಹೊಂದಿಕೊಂಡು ಬಿಡುತ್ತಾನೆ. ಅವನು ತಲೆ ಎತ್ತದಂತೆ ಆಗಾಗ ತಲೆಯ ಮೇಲೆ ತಟ್ಟುತ್ತಿರಬೇಕಷ್ಟೆ. ಕ್ರಿಮಿಗಳ ಮೇಲೆ ನಾವು ಸದಾ ಯುದ್ಧ ಸಾರಿದ್ದರ ಫಲ ಈಗ ಅನುಭವಿಸಬೇಕಾಗಿದೆ.

ಬ್ಯಾಕ್ಟೀರಿಯಾಗಳ ವಿರುದ್ಧ ನಾವು ಜೀವಿರೋಧಕಗಳನ್ನು 'ಛೂ' ಬಿಟ್ಟಾಗ ಬಹಳಷ್ಟು ಬ್ಯಾಕ್ಟೀರಿಯಾಗಳು ಕೊಲ್ಲಲ್ಪಡುತ್ತವೆ. ಅವುಗಳ ಪೈಕಿ ಒಂದೋ ಎರಡೋ ತಪ್ಪಿಸಿಕೊಳ್ಳುತ್ತವೆ. ಅವು ನಮ್ಮ ಸುತ್ತಲೂ ಒಂದು ರಕ್ಷಣೆಯ ಕೋಟೆಯನ್ನು ಕಟ್ಟಿಕೊಳ್ಳುತ್ತವೆ. ಇವು ನಮ್ಮದೇ ಬೇರೆಯಾದ ಸಂತಾನಾಭಿವೃದ್ಧಿಯನ್ನು ಪ್ರಾರಂಭಿಸುತ್ತವೆ. ಈ ಕ್ರಿಯೆಗೆ 'ಮ್ಯುಟೇಶನ್' ಎನ್ನುತ್ತಾರೆ. ಈ ಹೊಸ ತಳಿ ಹಿಂದಿನ ಜೀವಿರೋಧಕಗಳಿಗೆ ಸಾಯುವುದಿಲ್ಲ. ಮತ್ತೆ ಇವಕ್ಕಾಗಿ ಹೊಸ ಜೀವಿರೋಧಕಗಳ ಅನ್ವೇಷಣೆ ಮತ್ತೆ ಅವುಗಳಲ್ಲಿ ಹೊಸ ತಳಿ. ಅವುಗಳಿಗಾಗಿ ಹೊಸ ಜೀವಿರೋಧಕಗಳು ಬೇಕು. ಹೀಗೆ ನಿರಂತರ ಯುದ್ಧ ನಡೆಯುತ್ತಲೇ ಇರಬೇಕಾಗುತ್ತದೆ. ಹೀಗಾಗಿಯೇ ಹಿಂದೆ ಜಯಿಸಲ್ಪಟ್ಟಿದ್ದವೆಂದು ಹೇಳುವ ಕ್ಷಯ, ಮಲೇರಿಯಾ ಪ್ಲೇಗ್ ಎಲ್ಲವೂ ಮತ್ತೆ ಬಂದವು. ಈಗ ಅವು ಹಳೆಯ ಜೀವಿರೋಧಕ ಗಳಿಗೆ ಬಗ್ಗುವುದೂ ಇಲ್ಲ. ಹೊಸ ಜೀವಿರೋಧಕಗಳ ಅನ್ವೇಷಣೆಗೆ ಕೊನೆಯಿಲ್ಲ. ಈ ಯುದ್ಧದಲ್ಲಿ ಬ್ಯಾಕ್ಟೀರಿಯಾಗಳೇ ಜಯಿಸಲ್ಪಟ್ಟವು ಎಂದರೆ ತಪ್ಪಿಲ್ಲ! – 'ಶಕ್ತಿಗುಂದುತ್ತಿರುವ ಆ್ಯಂಟಿಬಯೋಟಿಕ್ಸ್'– ಸುಧಾ; 'ಕ್ಷೀಣಿಸುತ್ತಿರುವ ಆ್ಯಂಟಿಬಯೋಟಿಕ್ಸ್ ಶಕ್ತಿ', –ತರಂಗ, ಡಿಸೆಂಬರ್ 1993. 'ರೊಚ್ಚಿಗೆದ್ದ ರೋಗಾಣುಗಳು', ತರಂಗ, ಮೇ 1998;.

'Antibiotics are no longer a remedy for malady' ಮುಂತಾದ ತಲೆಬರಹದ ಲೇಖನಗಳೇ ಜೀವಿರೋಧಕಗಳು ಶಕ್ತಿಗುಂದುತ್ತಿರುವುದರ ಸಂಕೇತ. ಇದು ಕಥೆಯ ಮೊದಲ ಭಾಗ. ಇದರ ಮುಂದಿನ ಭಾಗ ಇನ್ನೂ ಭಯಾನಕ. ಈ ಜೀವಿರೋಧಕಗಳು ಜೀವಿಯ ಜೀವವನ್ನೇ ಹಿಂಡುತ್ತಿವೆ.

'ವಿಜ್ಞಾನಿಗಳು ಶಕ್ತಿಶಾಲಿ ಸೊಳ್ಳೆನಾಶಕ ಡಿ.ಡಿ.ಟಿ.ಯನ್ನು ತಯಾರಿಸಿದರು. ಅನೇಕ ವರ್ಷಗಳವರೆವಿಗೂ ಅದು ಬಳಕೆಯಲ್ಲಿ ಉಳಿಯಿತು. ಕಡೆಗೆ ಸೊಳ್ಳೆಗಳು ಡಿ.ಡಿ.ಟಿ. ಯನ್ನೇ ತಿಂದು ಕರಗಿಸತೊಡಗಿದವು. ವಿಷವೆಂದು ತಿಳಿದಿದ್ದ ಮದ್ದು ಅವಕ್ಕೆ ಆಹಾರವಾಯಿತು. ಜೊತೆಗೆ ಡಿ.ಡಿ.ಟಿ. ಮನುಷ್ಯರ ಮೇಲೆ ಎಂತಹ ಕೆಟ್ಟ ಪರಿಣಾಮ ಬೀರುತ್ತದೆ ಎನ್ನುವುದು ಬೆಳಕಿಗೆ ಬಂತು. ಆಗ ಬೇರೇ ದೇಶದವರು ಡಿ.ಡಿ.ಟಿ. ಬಳಕೆಯನ್ನು ನಿಲ್ಲಿಸಿದರೂ ಭಾರತದಲ್ಲಿ ಮಾತ್ರ ಇದು ಮುಂದುವರೆಯಿತು'– ಡಾ।ಎಸ್.ಜಿ. ನಾಗಲೋಟಿಮಠ– 'ಮಲೇರಿಯಾ ನಿಯಂತ್ರಣದ ದಾರಿ ಸರಿಯಾಗಿದೆಯೇ?' –ವಿಜಯ ಕರ್ನಾಟಕ, 17ನೇ ಮೇ, 2001.

'ಯಾವ ತರಹದ ರಾಸಾಯನಿಕ ಪದಾರ್ಥವೂ ಆರೋಗ್ಯದ ದೃಷ್ಟಿಯಲ್ಲಿ ಬಹಳ ಹಾಳು. ಜೀವಕೋಟಿಯಲ್ಲಿ ಯಾವುದಾದರೂ ಒಂದನ್ನು ಕೊಲ್ಲುವ ಶಕ್ತಿಯುಳ್ಳ ರಾಸಾಯನಿಕ ಪದಾರ್ಥ ಮನುಷ್ಯನ ಜೀವದ ಮೇಲೂ ದುಷ್ಪರಿಣಾಮ ಬೀರುವುದರಲ್ಲಿ ಆಶ್ಚರ್ಯವೇನು?' –ಡಾ॥ ಬಿ.ಎಂ. ಹೆಗ್ಡೆ –'ರೋಗ ನಿಧಾನ.'

'Antibiotics could have side effects ranging from allergic reaction to stomach irritations, diarrhoea, liver and kidney problems, irritation of the brain, anemia and seizure.' - patients pay dearly - dos and don'ts of medicine.- ? 'ಜೀವಿರೋಧಕಗಳ ಪಾರ್ಶ್ವಪರಿಣಾಮವು, ಅಲರ್ಜಿಯಿಂದ ಹಿಡಿದು ಹೊಟ್ಟೆಯ ಉರಿ. ಅತಿಸಾರ, ಪಿತ್ತಜನಕಾಂಗ ಮತ್ತು ಮೂತ್ರಜನಕಾಂಗಗಳ ತೊಂದರೆ, ಮೆದುಳಿನ ಕಿರಿಕಿರಿ, ರಕ್ತಹೀನತೆ ಮುಂತಾದುವುಗಳಾಗಿವೆ'. – Sunday Herald, July 1995.

ಜೀವಿರೋಧಕಗಳು ಬ್ಯಾಕ್ಟೀರಿಯಾಗಳಿಗೆ ವಿರೋಧಿಗಳಾಗಿ





ಪ್ರಾರಂಭವಾಗಿ, ಕಡೆಗೆ ಅವಕ್ಕೇ ಆಹಾರವಾಗಿ, ಮನುಜನ ಜೀವನಕ್ಕೆ ವಿರೋಧಕವಾಗಿ, ವಿಷವಾಗಿ ಪರಿಣಮಿಸಿವೆ. ಬ್ಯಾಕ್ಟೀರಿಯಾಗಳಿಗೆ ಈ ಹಾಲಾಹಲವನ್ನು ಆಹಾರವಾಗುವಂತೆ ಮಾಡಿದವರು ಯಾರು? ಆದರೆ ಮನುಜನಿಗೆ ಇದು ವಿಷವಾದದ್ದು ಹೇಗೆ? ಎರಡೂ ನಿಸರ್ಗದ್ದೇ ಕೆಲಸ. ನಿಸರ್ಗದ ನಿಯಮಕ್ಕೆ ಬದ್ಧವಾದ ಜೀವಾಣುಗಳಿಗೆ ವಿಷದ ವಿರುದ್ಧ ಹೋರಾಡುವ ಶಕ್ತಿಯನ್ನು ಅದು ನೀಡಿತು. ನಿಸರ್ಗದ ನಿಯಮವನ್ನು ಮೀರಿ ನಡೆಯಬಲ್ಲೆನೆಂಬ ಮನುಜ ತನ್ನ ಶಕ್ತಿಯನ್ನು ತಾನೇ ಕಡಿಮೆ ಮಾಡಿಕೊಂಡ. ಇನ್ನೂ ಸಾವಿರಾರು ವರ್ಷ ಎಷ್ಟೇ ಕಠೋರವಾದ ವಿಷವನ್ನು ತಯಾರಿಸಿ ಬ್ಯಾಕ್ಟೀರಿಯಾದೊಂದಿಗೆ ಬಡಿದಾಡಿದರೂ ಗೆಲ್ಲಲು ಸಾಧ್ಯವಿಲ್ಲ. ಅದರ ಬದಲು ಮನುಷ್ಯನು ತಾನೂ ಸಹ ನಿಸರ್ಗದ ನಿಯಮಗಳನ್ನು ಅನುಸರಿಸಿ ತನ್ನ ಸ್ವಂತ ರೋಗ ನಿರೋಧಕ ಶಕ್ತಿಯನ್ನು ಹೆಚ್ಚಿಸಿಕೊಂಡು ತನ್ನ ಪರಿಸರ ಮತ್ತು ಶರೀರದ ಒಳಗಿನ ಸ್ವಚ್ಛತೆಯನ್ನು ಕಾಪಾಡಿಕೊಂಡರೆ ಬ್ಯಾಕ್ಟೀರಿಯಾಗಳು ಬೆಳೆಯಲು ಅವಕಾಶವಾಗುವುದಿಲ್ಲ. ಇದೊಂದೇ ಸರಳ, ಸುಲಭ, ನೇರವಾದ ನೈಸರ್ಗಿಕ ಮಾರ್ಗ.

ಪ್ರಶ್ನೆ : ಆ್ಯಂಟಿಬಯೋಟಿಕ್‌ಗಳಿಂದ ರೋಗಿಯು ಚೇತರಿಸಿಕೊಳ್ಳುತ್ತಿರುವನಲ್ಲ ಅದು ಹೇಗೆ?

ಒಂದು ಮನೆಯ, ಕಿಟಕಿ, ಬಾಗಿಲುಗಳನ್ನೆಲ್ಲಾ ಮುಚ್ಚಿ ಬೀಗ ಹಾಕಿಕೊಂಡು ರಜಾ ದಿನಗಳಲ್ಲಿ ತಿಂಗಳ ಕಾಲ ಊರಿಗೆ ಹೋಗಿದ್ದರು. ಬಂದು ಬಾಗಿಲು ತೆಗೆದು ನೋಡಿದರೆ ಮನೆಯ ತುಂಬ ಧೂಳು, ಜೇಡ ಇತ್ಯಾದಿ. ತಕ್ಷಣ ಅಂಗಡಿಯಿಂದ ಯಾವುದೋ ಒಂದು ಕ್ರಿಮಿನಾಶಕವನ್ನು ತಂದು ಹೊಡೆದರು. ಜೇಡ ಜಿರಲೆಗಳೆಲ್ಲಾ ಸತ್ತು ಬಿದ್ದವು. ಅದರ ಮೇಲೆ ಒಂದು ಹೊಸ ಜಮಖಾನವನ್ನು ಹಾಸಿದರು. ಜಮಖಾನ ಸುಂದರವಾಗಿದೆ. ಅದರ ಮೇಲೆ ಅತಿಥಿಗಳನ್ನೂ ಕೂಡಿಸಿದರು. ಮೇಲೆ ಧೂಳಿಲ್ಲ. ಆದರೆ ಕೆಳಗೆ ಕೆಲವೇ ದಿನಗಳಲ್ಲಿ ಮತ್ತೆ ಕ್ರಿಮಿಗಳು ಹುಟ್ಟಿಕೊಂಡವು. ಹೀಗಾಗುತ್ತದೆ ಆ್ಯಂಟಿಬಯೋಟಿಕ್‌ಗಳಿಂದ ಮಾಡಿದ ಚಿಕಿತ್ಸೆ ಅದು ತಾತ್ಕಾಲಿಕವಾಗಿ ಉಪಶಮನ ನೀಡಿದರೂ ಮುಂದೆ ಹೆಚ್ಚಿನ ಕಷ್ಟಕ್ಕೆ ಸಿಕ್ಕಿಕೊಳ್ಳುತ್ತೇವೆ.

**ವ್ಯಾಕ್ಸೀನ್‌ಗಳು ಮತ್ತು ವಿವೇಕ :**

ನಿಸರ್ಗದ ರಕ್ಷಣಾ ವ್ಯವಸ್ಥೆಯ ಮೇಲೆ ನಂಬಿಕೆ ಕಡಿಮೆಯಾದಂತೆ, ಬುದ್ಧಿಶಕ್ತಿಯ ಮೇಲೆ ಭರವಸೆ ಹೆಚ್ಚಿದಂತೆ, ಮನುಜನು ಅನೇಕ ಸ್ವಯಂ ರಕ್ಷಣೆಯ ಉಪಾಯಗಳನ್ನು ಕಂಡುಕೊಂಡ. ಅವೇ ವ್ಯಾಕ್ಸೀನುಗಳು. ಈಗ ಮಗುವು ಹುಟ್ಟುವ ಮುಂಚಿನಿಂದಲೇ ಇವುಗಳ ಸಹಾಯ ಪಡೆದಿರುತ್ತದೆ. ಮುಂದೆ ಯೂ ಸಹ ಇವುಗಳ ಸಹಾಯವೆಂಬ ಛತ್ರಿಯಡಿಯಲ್ಲೇ ಅವು ಬೆಳೆಯಬೇಕು. ಅವು ಅನಿವಾರ್ಯ ಎಂಬ ಸಿದ್ಧಾಂತಕ್ಕೆ ಮನುಷ್ಯನು ಬಂದಿದ್ದಾನೆ. ಜೆನ್ನರ್ ಇದರ ಜನಕ. ಸಿಡುಬು ಎಲ್ಲರಿಗೂ ಬಂದಿದ್ದರೂ ಗೌಳಿಗ ಹೆಂಗಸರಿಗೆ ಬರಲಿಲ್ಲ. ಇದು ಜೆನ್ನರ್‌ಗೆ ಆಶ್ಚರ್ಯವನ್ನುಂಟುಮಾಡಿತು. ಹಸುವಿಗೆ ಬಂದಿದ್ದ ಸಿಡುಬಿನ ಲಸಿಕೆ ಗೌಳಿಗ ಹೆಂಗಸರಿಗಾಗಿದ್ದ ಗಾಯಕ್ಕೆ ಮೊದಲೇ ತಗುಲಿದ್ದುದೇ ಇದಕ್ಕೆ ಕಾರಣ ಎಂಬ ತೀರ್ಮಾನಕ್ಕೆ ಬರುವಂತೆ ಮಾಡಿತು. ಅಲ್ಲದೆ 'ದನದ ಸಿಡುಬಿನ ರಸವನ್ನು ವ್ಯಕ್ತಿಯೊಬ್ಬನಿಗೆ ಚುಚ್ಚಿದರೆ ಅದು ಅವನ ಶರೀರದಲ್ಲಿ ರೋಗನಿರೋಧಕ ಶಕ್ತಿಯನ್ನು ಹೆಚ್ಚಿಸಿ ಸಿಡುಬಿನ ಕೀಟಾಣುವಿನೊಂದಿಗೆ ಹೋರಾಡಿ ಜಯಗಳಿಸಿ ಸಿಡುಬು ಬರದಂತೆ ತಡೆಯುತ್ತದೆ' ಎಂಬ ತರ್ಕಕ್ಕೆ ದಾರಿ ಮಾಡಿಕೊಟ್ಟಿತು. ಅವರು ಇದನ್ನು ವ್ಯಾಕ್ಸಿನೇಷನ್ ಎಂದು ಕರೆದರು. ಲ್ಯಾಟೀನ್ ಭಾಷೆಯಲ್ಲಿ ವ್ಯಾಕ್ಸ್ ಅಂದರೆ ಹಸು ಹೀಗಾಯಿತು ವ್ಯಾಕ್ಸಿನೇಷನ್ ಶಾಸ್ತ್ರದ ಉಗಮ. ಈಗ ಯಾವುದೇ ರೀತಿಯ ರೋಗ ಪ್ರತಿಬಂಧಕ ಚುಚ್ಚುಮದ್ದಿಗೂ 'ವ್ಯಾಕ್ಸಿನೇಷನ್' ಎಂದೇ ಕರೆಯುತ್ತಾರೆ. ಹಿಂದೆ ಜೆನ್ನರ್‌ಗೆ ಈಗ ಕೊಡುತ್ತಿರುವ ಅನೇಕ ಧೃಡೀಕರಣ ಪತ್ರಗಳನ್ನು ಕೊಡಲು ಗೊತ್ತಿರಲಿಲ್ಲ. ಇಂದು ಲಿಂಪ್ರೋಸೈಟ್, ಟಿ–ಲಿಂಪೋಸೈಟ್, ಪ್ರತಿಜನಕ (Antigen), ಬಿ–ಲಿಂಪೋಸೈಟ್, ಪ್ರತಿಕಾಯ(Antibody) ಸಿ–ಜೀವಕೋಶ, ಇಮ್ಯುನೋ ಗ್ಲಾಬ್ಯುಲಿನ್– ಜಿ. (I.G.G) ರೋಗನಿರೋಧಕ ಜ್ಞಾಪಕಶಕ್ತಿ, ಮುಂತಾದ ವಿಶ್ಲೇಷಣೆಗಳನ್ನು ನೀಡಿ ಹಳೆಯ ವಿಚಾರಕ್ಕೆ ಹೊಸ ಮೆರುಗುಗಳನ್ನು ಕೊಡಲಾಗುತ್ತಿದೆ. ಜೆನ್ನರ್‌ನ ನಂತರ ನೂರು ವರ್ಷಗಳಾದ ಮೇಲೆ ಲೂಯಿ ಪಾಶ್ಚರನ ಆಗಮನವಾಯಿತು. ಅವನ ಸಂಶೋಧನೆಗಳಿಂದ ಪ್ರತಿ ರೋಗಕ್ಕೆ ಒಂದು ನಿರ್ದಿಷ್ಟ ಸೂಕ್ಷ್ಮಾಣುವಿರಲೇಬೇಕೆಂಬ ಸಿದ್ಧಾಂತ ಪ್ರತಿಪಾದಿಸಲ್ಪಟ್ಟಿತು. ಬೇರೆ ಮಾಧ್ಯಮದಲ್ಲಿ ಬೆಳೆಸಿದ(ಕಲ್ಚರ್ಡ್) ರೋಗಾಣುಗಳನ್ನು ಶಕ್ತಿಗುಂದಿಸಿ ಆರೋಗ್ಯವಂತ ಶರೀರಕ್ಕೆ ಚುಚ್ಚಿದರೆ ಬಲಗುಂದಿದ ರೋಗಾಣುಗಳು ರೋಗನಿರೋಧಕ ಏಜೆಂಟರುಗಳಾಗಿ ಕೆಲಸ ಮಾಡುತ್ತವೆಂಬ ಗುಟ್ಟು ಗೊತ್ತಾಯಿತು. ಮುಂದೆ ಬಲಗುಂದಿದ ರೋಗಾಣುವಿನ ಬದಲು ಸತ್ತ ರೋಗಾಣುಗಳನ್ನೇ ವ್ಯಾಕ್ಸಿನ್ ತಯಾರಿಸಲು ಬಳಸಬಹುದೆನ್ನುವುದನ್ನು ಅರಿತರು. ಈಗ ಟೈಫಾಯಿಡ್, ಕಾಲರಾ, ನಾಯಿಕೆಮ್ಮುಗಳ ವಿರುದ್ಧದ ವ್ಯಾಕ್ಸೀನ್‌ಗಳು ಸತ್ತ ರೋಗಾಣುಗಳದಾಗಿವೆ. ಸದ್ಯದಲ್ಲಿ ಧನುರ್ವಾಯು, ಗಂಟಲಮಾರಿ, ನಾಯಿಕೆಮ್ಮು, ಪೋಲಿಯೋ, ಕ್ಷಯ, ದಡಾರಗಳ ಜೊತೆಗೆ ಇನ್ನೂ ಅನೇಕ ರೋಗಗಳಿಗೆ ಚುಚ್ಚುಮದ್ದನ್ನು ಕೊಡಲಾಗುತ್ತದೆ.

ಸಣ್ಣ ಕರುಗಳ ಚರ್ಮದಲ್ಲಿ ದನದ ಸಿಡುಬಿನ ವೈರಸ್ಸನ್ನು ಬೆಳೆಸಿ, ಅದನ್ನು ಸಿಡುಬು ರೋಗದ ವಿರುದ್ಧ ಚುಚ್ಚುಮದ್ದನ್ನು ತಯಾರಿಸಲು ಬಳಸಲಾಗುತ್ತದೆ. ಕೋಳಿಯ ಭ್ರೂಣದ ಒಳಪೊರೆಗಳಲ್ಲಿ ಹಳದೀ ಜ್ವರದ ವೈರಸನ್ನು ಬೆಳೆಸಲಾಗುತ್ತದೆ. ಕುಷ್ಠರೋಗವನ್ನುಂಟು ಮಾಡುವ ಬ್ಯಾಕ್ಟೀರಿಯಾಗಳನ್ನು ನಾಶಪಡಿಸಲು ಇಲಿಯ ಪಾದದಲ್ಲಿ ಬೆಳೆಸಿದ ವೈರಸ್ಸನ್ನು ಉಪಯೋಗಿಸಲಾಗುತ್ತದೆ. ಇವುಗಳಿಂದ ಸುಲಭವಾಗಿ ವ್ಯಾಕ್ಸೀನ್ ತಯಾರಿಸಲು ಪ್ರಯತ್ನಗಳು ನಡೆಯುತ್ತಿವೆ. ಇದು ವ್ಯಾಕ್ಸೀನ್‌ಗಳ ಸಾಧನೆಯ ಒಂದು ಮುಖ.

ಸತ್ತ ರೋಗಾಣುಗಳಿಗಿಂತ, ಬಲಕುಗ್ಗಿಸಿದ ಜೀವಂತ ರೋಗಾಣುಗಳಿಂದ ತಯಾರಿಸಿದ ಚುಚ್ಚುಮದ್ದೇ ಉತ್ತಮ ವೆಂಬುದು ಕೆಲವರ ಅಭಿಪ್ರಾಯ. ಈ ಜೀವಂತ ರೋಗಾಣುಗಳು ಮ್ಯುಟೇಷನ್‌ನಿಂದ ಬಲಿಷ್ಠ ರೋಗಾಣುಗಳಾಗಿ ರೋಗವನ್ನು ತರಲೂಬಹುದು ಎಂಬುದು ಮತ್ತೊಂದು ವಾದ. ಇದು ಬರೀ ವಾದವಲ್ಲ. ಅನೇಕ ಸಲ ನಿಜವೂ ಆಗಿದೆ. ಇದರಿಂದ ರೋಗಕ್ಕೆ

ರಕ್ಷಣೆ ಕೊಡುವ ಬದಲು ಇವೇ ರೋಗಕಾರಕ ಗಳಾಗಿವೆ.

ರೋಗಾಣುಗಳೇ ಕಾಯಿಲೆಗೆ ಕಾರಣವಲ್ಲವೆಂದ ಮೇಲೆ ಈ ಕೃತಕ ರಕ್ಷಣೆಯ ಅಗತ್ಯವೇನು?

'The root assumption that germs are the cause of disease must be seriously re-examined. Brilliant men and women throughout the world challenge this unsound theory." - Immunisation theory and reality. - 'ಎಲ್ಲಾ ಕಾಯಿಲೆಗಳಿಗೂ ರೋಗಾಣುವೇ ಮೂಲ ಕಾರಣ ಎಂಬ ನಂಬಿಕೆಯನ್ನೇ ಗಂಭೀರವಾಗಿ ಪರೀಕ್ಷೆಗೊಳಪಡಿಸ ಬೇಕಾದ ಕಾಲ ಬಂದಿದೆ. ಪ್ರಪಂಚದ ಅನೇಕ ಅತಿ ಬುದ್ಧಿವಂತ ಗಂಡಸರೂ ಹಾಗೂ ಹೆಂಗಸರೂ ಈ ದೋಷಯುಕ್ತವಾದ ವಿಚಾರಸರಣಿಯನ್ನೇ ಆಕ್ಷೇಪಿಸುತ್ತಿದ್ದಾರೆ." – Neil Z.Miller.

ಮಿಲ್ಲರ್‌ರ ಈ ಪುಸ್ತಕವನ್ನು ಪ್ರತಿಯೊಬ್ಬರೂ ಓದಲೇಬೇಕು. ಆದರಲ್ಲಿ ಅವರು ಈ ವ್ಯಾಕ್ಸೀನ್‌ಗಳಿಂದ ಆಗಿರುವ ಅನಾಹುತಗಳ ಬಗ್ಗೆ ಅಂಕಿ ಅಂಶಗಳ ಸಮೇತ ಸತ್ಯವೇನೆಂಬುದನ್ನು ತಿಳಿಸಿದ್ದಾರೆ. ಈ ವ್ಯಾಕ್ಸಿನೇಷನ್‌ಅನ್ನು ಬಲಾತ್ಕಾರವಾಗಿ ಹಾಕುವ ಮಟ್ಟಕ್ಕೆ ನಮ್ಮ ಸರ್ಕಾರ ಹೋಗಿದೆ. ಅಮೇರಿಕಾದಲ್ಲಿ ವಿಚಾರ ಸ್ವಾತಂತ್ರ್ಯ ವಿದೆ. ನಮ್ಮದಾದರೋ ಬರೀ ಅಂಧಾನುಕರಣೆ. ಬಿ.ಸಿ.ಜಿ ಯನ್ನು ಭಾರತಕ್ಕೆ ತಂದಾಗ ಚಕ್ರವರ್ತಿ ರಾಜಗೋಪಾಲಾಚಾರಿಯವರು ಅದರ ವಿರುದ್ಧ ಹೋರಾಡಿದ್ದರು. ಈಗ ಹೋರಾಟದ ಶಕ್ತಿಯೇ ಕುಂದಿಹೋಗಿದೆ.

ರೋಗ ಬರುವ ಮೊದಲೇ ರಕ್ಷಣೆ ಅಂದರೇನು? ನಮ್ಮ ಶರೀರದಲ್ಲಿ ನೈಸರ್ಗಿಕ ರಕ್ಷಣಾ ವ್ಯವಸ್ಥೆ ಇಲ್ಲವೇ? ವಿಜ್ಞಾನ ವೆನ್ನುವುದು ನಿಸರ್ಗ ವಿಶ್ಲೇಷಣೆಯಷ್ಟೇ ವಿನಃ ಅದಕ್ಕೆ ಬದಲಿ ವ್ಯವಸ್ಥೆಯಲ್ಲ ಅಲ್ಲವೇ? ಆ ಕಣ್ಣಿಗೆ ಕಾಣದ ಕೀಟಾಣುವಿನ ಮೇಲೆ ಏಕಷ್ಟು ಕೋಪ? ಆ ಬಡಪಾಯಿ, ನಿಸರ್ಗದ ಜಾಡಮಾಲಿ, ಕೊಳೆಯಿರುವ ಜಾಗಕ್ಕೆ ಮಾತ್ರ ಬರುತ್ತದೆ. ಸ್ವಚ್ಛವಾದ ವಾತಾವರಣದಲ್ಲಿ ಅದರ ಪ್ರಭಾವ ಬೆಳೆಯದು. ಕಬ್ಬಿಣದ ಅಂಗಡಿ ಯಲ್ಲಿ ನೊಣಕ್ಕೇನು ಕೆಲಸ?! ಆ ಬಡಪಾಯಿಯ ಮೇಲೆ ನಮ್ಮೆಲ್ಲಾ ಶಕ್ತಿ, ಹಣ ಮತ್ತು ಕಾಲ ಎಲ್ಲವನ್ನೂ ವ್ಯಯಿಸಬೇಕೇ? ಒಂದು ಸಾಮಾನ್ಯ ನೆಗಡಿಯ ವೈರಸ್ಸನ್ನು ಓಡಿಸಲಾಗಿದೆಯೇ? ಬಿಲಿಯನ್‌ಗಟ್ಟಲೇ ಇರುವ ಬ್ಯಾಕ್ಟೀರಿಯಾಗಳಿಗೆ ಬರೀ ಮೂವತ್ತು ವ್ಯಾಕ್ಸಿನ್ ಸಾಕೇ? ಬಾಳುವ ಛಲವನ್ನು ನಮಗಿತ್ತಿರುವಂತೆ ಅವುಗಳಿಗೂ ನಿಸರ್ಗ ನೀಡಿಲ್ಲವೇ? ನಿಸರ್ಗತತ್ವ ಸಹಬಾಳ್ವೆ. ಮನುಷ್ಯನು ತಾನು ಸೃಷ್ಟಿಯ ಒಡೆಯನೆಂದುಕೊಂಡಿದ್ದರ ಫಲ–ಸ್ವಾರ್ಥ ಚಿಂತನೆ. ಜೆನ್ನರನ ಕಾಲದಿಂದ ಇಷ್ಟು ವರ್ಷಗಳು ಹೋರಾಡಿದ್ದರ ಫಲ–ಸ್ವಾರ್ಥ ಚಿಂತನೆ. ಜೆನ್ನರನ ಕಾಲದಿಂದ ಇಷ್ಟು ವರ್ಷಗಳು ಹೋರಾಡಿದ್ದರೂ ಅನುಭವ ಬರದಿದ್ದರೆ ಬಹುಶಃ ಮನುಷ್ಯನನ್ನು ತಿದ್ದುವುದು ಬಹಳ ಕಠಿಣವಿರಬೇಕು. ಅಥವಾ ಈ ಚಿಂತನೆಯಿಂದ ಒಂದು ವರ್ಗಕ್ಕೆ ಏನೋ ಲಾಭ ವಿರಬೇಕು.

'Are we better off today than we were a century ago? In most respects we are worse off. We have been neglectful of microbes and that is a recurring theme that is coming back to haunt us'- 'ನಾವು ನೂರು ವರ್ಷ ಹಿಂದಿಗಿಂತ ಉತ್ತಮರಾಗಿ ದ್ದೇವೆಯೇ? ಅನೇಕ ವಿಷಯಗಳಲ್ಲಿ ಇನ್ನೂ ಹಾಳಾಗಿದ್ದೇವೆ. ನಾವು ಮಿಣಿಜೀವಿಗಳ ಬಗ್ಗೆ ಉದಾಸೀನರಾಗಿದ್ದೇವೆ. ಅವು ಮತ್ತೆ ಬಂದು ನಮ್ಮನ್ನು ಕಾಡುತ್ತಿವೆ.'
– Micro biologist and noble Laurate, Joshua Lederburg.

ಲೆಡರ್‌ಬರ್ಗ್‌ರವರು ಹೇಳಿರುವಂತೆ 'ಮೈಕ್ರೋಬ್‌ಗಳ ಬಗ್ಗೆ ನಾವೇನೂ ತಿರಸ್ಕಾರವನ್ನು ತೋರಿಸುತ್ತಿಲ್ಲ. ಬದಲು ಸದಾ ಅವುಗಳ ಬಗ್ಗೆಯೂ ಚಿಂತಿಸುತ್ತಿದ್ದೇವೆ. ಅವುಗಳ ನಿರ್ನಾಮಕ್ಕಾಗಿ ಸದಾ ಹೋರಾಡುತ್ತಿದ್ದೇವೆ. ಆದರೆ ಶತಶತಮಾನಗಳ ಹಿಂದೆ ಹೇಗಿದ್ದೆವೋ ಹಾಗೆಯೇ ಇದ್ದೇವೆ ಎಂದರೂ ಸರಿ.

ನನ್ನ ಒಂದು ಅನುಭವ. ಒಮ್ಮೆ ನನ್ನ ಮೊಮ್ಮಗುವಿಗೆ ಡಿ.ಪಿ.ಟಿ. ಬೇಡವೆಂದ ತಕ್ಷಣ ವೈದ್ಯರ ಸಿಟ್ಟು ನೆತ್ತಿಗೇರಿತು. ಅವರು ಸಿಟ್ಟಿನಿಂದ ನುಡಿದರು, "ಏನ್ರೀ! ಎಂಥ ಎಜುಕೇಟೆಡ್‌ರೀ ನೀವು. ನಿಮ್ಮ ಮಗು ಎಲ್ಲಾದರೂ ಹೋಗಲಿ, ಅದಕ್ಕೆ ಸೋಂಕು ತಗುಲಿ ಬೇರೆ ಮಕ್ಕಳಿಗೆ ಹರಡಿದರೆ ಏನು ಮಾಡುವುದು. ಸ್ವಲ್ಪವೂ ಸಾಮಾಜಿಕ ಜವಾಬ್ದಾರಿ ಇಲ್ಲ' ಹೀಗೆ ದೊಡ್ಡ ದೊಡ್ಡ ವಿಷಯಗಳ ಬಗ್ಗೆ ಭಾಷಣ ಬಿಗಿದರು. ನಾನು ಒಂದು ಸಣ್ಣ ಪ್ರಶ್ನೆ ಕೇಳಿದೆ. 'ಸ್ವಾಮಿ! ಎಷ್ಟು ಮಕ್ಕಳಿಗೆ ಡಿ.ಪಿ.ಟಿ. ಹಾಕಿದ್ದೀರಿ?' '99.9% ಮಕ್ಕಳಿಗೆ' – ಅವರ ಉತ್ತರ.

'ಸ್ವಾಮಿ 0.1%ನಲ್ಲಿ ನಮ್ಮ ಮಗು ಸೇರಿದೆ. 99.9% ಮಕ್ಕಳಿಗೆ ನೀವು ರಕ್ಷಣೆ ಕೊಟ್ಟ ಮೇಲೆ ಭಯ ಏಕೆ? ನಮ್ಮ ಮಗುವಿಗೆ ಕಾಯಿಲೆ ಬಂದರೂ ನಿಮ್ಮ ಇತರೆ ಮಕ್ಕಳಿಗೆ ರಕ್ಷಣೆ ಇರುವುದರಿಂದ ಕಾಯಿಲೆ ಬರುವುದಿಲ್ಲ ಅಲ್ಲವೇ? –ಎಂದು ನನ್ನ ತರ್ಕವನ್ನು ಮುಂದಿಟ್ಟೆ. ನನ್ನಂತಹ ಭಂಡನ ಹತ್ತಿರ ಏನು ಮಾತೆಂದು ಸುಮ್ಮನಾದರು!.

ಪ್ರಶ್ನೆ: ರೋಗಕ್ಕೆ, ತಪ್ಪಾದ ಕಾರಣವನ್ನು ನಂಬಿ ಹೋರಾಡಿದರೆ ನಮ್ಮದೂ ಸಹ ಐಲುದೊರೆ ಡಾನ್ ಕ್ವಿಕ್ಸೋಟನ ಸಾಹಸದಂತೆಯೇ ಆಗುತ್ತದಲ್ಲವೆ?

'ಡಾನ್ ಕ್ವಿಕ್ಸೋಟ್'– ಇದೇ ಹೆಸರಿನ ಸರ್ ವಾಂಟಸ್‌ನ ಪ್ರಸಿದ್ಧ ಪುಸ್ತಕದ ನಾಯಕ. ಶತೃಗಳನ್ನು ಊಹಿಸಿಕೊಂಡು ಅವರೊಂದಿಗೆ ಮೊಂಡು ಕತ್ತಿಯಿಂದ ಇವನ ಹೋರಾಟ. ಗಾಳಿಯನ್ನು ಶತೃವಿನ ಸ್ಥಾನದಲ್ಲಿಟ್ಟು ಅದರೊಂದಿಗೆ ಯುದ್ಧ. ಒಮ್ಮೆ ಒಬ್ಬ ರಾಜಕುಮಾರಿಯನ್ನು ಮೇನೆಯಲ್ಲಿ ನಾಲ್ಕು ಜನ ಸೇವಕರು ಒಯ್ಯುತ್ತಿರುವುದನ್ನು ನೋಡುತ್ತಾನೆ. ತಕ್ಷಣ ಇವನ ಸಾಹಸ ಪ್ರಜ್ಞೆ ಜಾಗೃತವಾಗುತ್ತದೆ. ಆ ಮೇನೆಯನ್ನು ಒಯ್ಯುತ್ತಿರುವ ರಾಜಸೇವಕರು ಅವಳನ್ನು ಅಪಹರಿಸುತ್ತಿರು ವವರಂತೆ ಕಾಣುತ್ತಾರೆ. ಅವರೊಂದಿಗೆ ಇವನ ಮೊಂಡು ಕತ್ತಿಯ ಕತ್ತಿವರಸೆ ಪ್ರಾರಂಭ. ಇಂತಹ ಇನ್ನೂ ಅನೇಕ ಅವನ ಸಾಹಸಗಳಿಂದ ಕೂಡಿದೆ ಆ ಪುಸ್ತಕ. ನಮ್ಮ ಸಾಹಸವೂ ಇಂತಹುದೇ. ಕೃತಕ ರಕ್ಷಣೆಗಾಗಿ ಇಷ್ಟೊಂದು ಅನವಶ್ಯಕ ಸಾಹಸ ಮಾಡುವುದಕ್ಕಿಂತಲೂ ನೈಸರ್ಗಿಕ ರಕ್ಷಣೆಯ ಬಗ್ಗೆ ಯೋಚಿಸಿದ್ದರೆ ಉತ್ತಮವಾಗಿತ್ತಲ್ಲವೇ?

– ಮುಂದುವರೆಯುತ್ತದೆ.





# ಸಿದ್ಧೇಶ್ವರ ಪುರಾಣ

## – ನವಚಕ್ರಗಳಲ್ಲಿ ನೂರೊಂದು ಸ್ಥಲ ಸಂಬಂಧ

– ಕೋ. ರಂ. ಬಸವರಾಜು, ಪ್ರಾಧ್ಯಾಪಕರು, ಸಂಸ್ಕೃತ ಕಾಲೇಜು, ಶ್ರೀ ಸಿದ್ಧಗಂಗಾ ಮಠ.

| ಕ್ರ ಸಂ. | ಚಕ್ರದ ಹೆಸರು | ಚಕ್ರದ ಸ್ಥಲಗಳು | ಸಂಖ್ಯೆ |
|---|---|---|---|
| ೧ | ಆಧಾರ ಚಕ್ರದಲ್ಲಿ | ೧. ಪಿಂಡ ೨. ಪಿಂಡಜ್ಞಾನ ೩. ಸಂಸಾರಹೇಯ ೪. ಗುರುಕರುಣ ೫. ವಿಭೂತಿ ೬. ರುದ್ರಾಕ್ಷಿ ೭. ದೀಕ್ಷಾಗುರು ೮. ಶಿಕ್ಷಾಗುರು ೯. ಜ್ಞಾನಗುರು ೧೦.ಕ್ರಿಯಾಲಿಂಗ ೧೧.ಭಾವಲಿಂಗ ೧೨. ಜ್ಞಾನಲಿಂಗ ೧೩. ಲಿಂಗ ಧಾರಣ | ೧೩ |
| ೨ | ಲಿಂಗ ಚಕ್ರದಲ್ಲಿ (ಸ್ವಾಧಿಷ್ಠಾನ) | ೧. ಕ್ರಿಯಾಗಮ ೨. ಭಾವಾಗಮ ೩. ಜ್ಞಾನಾಗಮ ೪. ಲಿಂಗಸಿದ್ಧಿ ೫. ಸಕಾಯ ೬. ಅಕಾಯ ೭. ಪರಕಾಯ ೮. ಪೂರ್ವಾಶ್ರಯನಿರಶನ ೯. ವಾಗದ್ವೈತ ನಿರಸನ ೧೦. ಆಹ್ವಾನನಿರಸನ ೧೧. ಅಷ್ಟಮೂರ್ತಿ ನಿರಸನ ೧೨. ಮಾಹೇಶ್ವರ ಪ್ರಶಂಸಾ ಸ್ಥಲಗಳು | ೧೨ |
| ೩ | ನಾಭಿಚಕ್ರದಲ್ಲಿ (ಮಣಿಪೂರಕ) | ೧.ಪ್ರಸಾದಿ ೨. ಕಾಯಾನುಗ್ರಹ ೩. ಇಂದ್ರಿಯಾನುಗ್ರಹ ೪. ಪ್ರಾಣಾನುಗ್ರಹ ೫. ಗುರುಮಹಾತ್ಮೆ ೬. ಲಿಂಗಮಹಾತ್ಮೆ ೭. ಜಂಗಮಮಹಾತ್ಮೆ ೮. ಭಕ್ತ ಮಹಾತ್ಮೆ ೯. ಶರಣಮಹಾತ್ಮೆ ೧೦. ಕಾಯಾರ್ಪಣ ೧೧. ಕರಣಾರ್ಪಣ ೧೨. ಭಾವಾರ್ಪಣ ಸ್ಥಲಗಳು. | ೧೨ |
| ೪ | ಅನಾಹತ ಚಕ್ರದಲ್ಲಿ | ೧. ಪ್ರಾಣಲಿಂಗಿ, ೨. ಶಿಷ್ಯ ೩. ಶುಶ್ರೂಷ ೪. ಸೇವ್ಯ ೫.ಪ್ರಾಣಲಿಂಗಾರ್ಚನಾ ೬.ಶಿವಯೋಗ ಸಮಾಧಿ ೭.ಲಿಂಗನಿಜಸ್ಥಲ ೮.ಆದಿಪ್ರಸಾದಿ ೯. ಅಂತ್ಯಪ್ರಸಾದಿ ೧೦.ಸೇವ್ಯಪ್ರಸಾದ ೧೧.ಆತ್ಮ ೧೨. ಅಂತರಾತ್ಮ ೧೩.ಪರಮಾತ್ಮ ಸ್ಥಲಗಳು | ೧೩ |
| ೫ | ವಿಶುದ್ಧಿ ಚಕ್ರದಲ್ಲಿ | ೧.ಕ್ರಿಯಾನಿಷ್ಪತ್ತಿ ೨. ಭಾವನಿಷ್ಪತ್ತಿ ೩. ಜ್ಞಾನನಿಷ್ಪತ್ತಿ ೪. ತಾಮರಸನಿರಸನ ೫. ಶರಣ ೬. ನಿರ್ದೇಶ ೭. ಪಿಂಡಾಕಾಶ ೮. ಬಿಂದ್ವಕಾಶ ೯. ಮಹಾಕಾಶಸ್ಥಲಗಳು | ೦೯ |
| ೬ | ಆಜ್ಞಾ ಚಕ್ರದಲ್ಲಿ | ೧. ಐಕ್ಯ ೨. ಸ್ವೀಕೃತ ಪ್ರಸಾದ ೩. ಶಿಷ್ಟೌದನ ೪. ಚರಾಚರಲಯ ೫. ಭಾಂಡ ೬. ಭಾಜನ ೭. ಅಂಗಲೇಪ ೮. ಆಚಾರಸಂಪತ್ತಿಸ್ಥಲಗಳು | ೦೮ |
| ೭ | ಬ್ರಹ್ಮ ಚಕ್ರದಲ್ಲಿ ಸಹಸ್ರದ | ೧.ಏಕಭಾಜನ ೨. ಸಹಭಾಜನ ೩. ಭಾವಾಭಾವಲಯ ೪. ಜ್ಞಾನಶೂನ್ಯ ೫. ಕ್ರಿಯಾಪ್ರಕಾಶ ೬. ಭಾವಪ್ರಕಾಶ ೭. ಜ್ಞಾನಪ್ರಕಾಶ ೮. ಶೀಲಸಂಪಾದನ ೯. ಸ್ವಪರಾಜ್ಞ ಸ್ಥಲಗಳು | ೯ |
| ೮ | ಶಿಖಾ ಚಕ್ರದಲ್ಲಿ | ೧. ಸರ್ವಗತ ನಿರಸನ ೨. ಧರ್ಮಾಚಾರ ೩. ಭಾವಾಚಾರ ೪. ಜ್ಞಾನಾಚಾರ ೫. ಶಿವಜಗನ್ಮಯ ೬. ಭಕ್ತದೇಹಿಕಲಿಂಗ ೭. ಪಂಚಾಕ್ಷರೀ ೮. ಸ್ವಯಜಂಗಮ ೯. ಚರ ೧೦. ಪರ ೧೧. ಭಕ್ತಿಮಾರ್ಗಕ್ರಿಯಾ ೧೨. ಉಭಯ ೧೩. ತ್ರಿವಿಧ ಸಂಪತ್ತಿ ೧೪. ಚತುರ್ವಿಧ ಸಾರಾಯ ೧೫. ಉಪಾಧಿಮಾಟ ೧೬. ನಿರುಪಾಧಿಮಾಟ ೧೭. ಸಹಜಮಾಟಸ್ಥಲಗಳು | ೧೭ |
| ೯ | ಪಶ್ಚಿಮ ಚಕ್ರದಲ್ಲಿ | ೧. ಅಂಗಲಿಂಗ ೨. ದೀಕ್ಷಾಪಾದೋದಕ ೩. ಶಿಕ್ಷಾಪಾದೋದಕ ೪. ಜ್ಞಾನ ಪಾದೋದಕ ೫. ಪ್ರಸಾದ ಮಹಾತ್ಮೆ ೬. ನಿರ್ದೇಹಾಗಮ ೭. ನಿರ್ಭಾವಾಗಮ ೮. ನಷ್ಟಾಗಮ | ೦೮ |
| | | ಒಟ್ಟು | ೧೦೧ |

### ನಾದ-ಬಿಂದು ಕಲೆಗಳಲ್ಲಿ ನೂರೊಂದು ಸ್ಥಲ ಸಂಬಂಧ

| | | |
|---|---|---|
| ನಾದ | ವಿಶುದ್ಧಿ ಚಕ್ರದಲ್ಲಿನ ಸ್ಥಲಗಳು = ೦೯<br>ಆಜ್ಞಾಚಕ್ರದಲ್ಲಿನ ಸ್ಥಲಗಳು = ೦೮<br>ಬ್ರಹ್ಮಚಕ್ರದಲ್ಲಿನ ಸ್ಥಲಗಳು = ೦೯ | ೨೬ |
| ಬಿಂದು | ಆಧಾರ ಚಕ್ರದಲ್ಲಿನ ಸ್ಥಲಗಳು = ೧೩<br>ಲಿಂಗ ಚಕ್ರದಲ್ಲಿನ ಸ್ಥಲಗಳು = ೧೨<br>ಶಿಖಾಚಕ್ರದಲ್ಲಿನ ಸ್ಥಲಗಳು = ೧೭ | ೪೨ |
| ಕಲಾ | ನಾಭಿಚಕ್ರದಲ್ಲಿನ ಸ್ಥಲಗಳು = ೧೨<br>ಅನಾಹತಚಕ್ರದಲ್ಲಿನ ಸ್ಥಲಗಳು = ೧೩<br>ಪಶ್ಚಿಮಚಕ್ರದಲ್ಲಿನ ಸ್ಥಲಗಳು = ೦೮ | ೩೩ |
| | ಒಟ್ಟು | ೧೦೧ |

## ಕಂಬನಿ



### ಲಿಂಗೈಕ್ಯ : ಆರ್. ವೀರಣ್ಣನವರು

ಸರಳತೆ, ಸಜ್ಜನಿಕೆ, ವಿನಯವಂತಿಕೆ, ಸಹೃದಯತೆ, ಶಿಸ್ತು, ಸಮಯಪಾಲನೆ ಮತ್ತು 'ಅಜಾತ ಶತ್ರು' ಎಂಬ ಬಿರುದನ್ನು ಹೊತ್ತ ಶ್ರೀ ಆರ್.ವೀರಣ್ಣನವರು ಉತ್ತಮ ಅಧ್ಯಾಪಕ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದವರು. ವಿದ್ಯಾರ್ಥಿಗಳಿಗೆ ಹಾಗೂ ಅಧ್ಯಾಪಕರಿಗೆ 'ಆರ್.ವಿ.' ಎಂದೇ ಪ್ರೀತಿ ಪಾತ್ರರಾಗಿದ್ದ ಶ್ರೀ ಆರ್. ವೀರಣ್ಣನವರು ಏಪ್ರಿಲ್ 22, 2006ರಂದು ನಿಧನರಾದರು.

ಶ್ರೀ ಆರ್. ವೀರಣ್ಣನವರು ಮಾಗಡಿ ತಾಲ್ಲೂಕಿನ ತುಂಬಿನಕೆರೆಯಲ್ಲಿ ಒಂದು ಬಡಕುಟುಂಬದಲ್ಲಿ ಶ್ರೀ ರುದ್ರಯ್ಯ ಮತ್ತು ಶ್ರೀಮತಿ ಓಂಬಕ್ಕನವರ ಹಿರಿಯ ಮಗನಾಗಿ ದಿನಾಂಕ 04-01-1939ರಲ್ಲಿ ಜನಿಸಿದರು. ನಂತರ ಹೊನ್ನುಡಿಕೆ ಗ್ರಾಮದಲ್ಲಿ ತಮ್ಮ ಪ್ರಾಥಮಿಕ ಶಾಲಾಭ್ಯಾಸವನ್ನು ಪ್ರಾರಂಭಿಸಿ 4ನೇ ತರಗತಿಗೆ ಶ್ರಿ ಸಿದ್ಧಗಂಗಾ ಮಠಕ್ಕೆ ಬಂದು ಸೇರಿದರು. ಶ್ರೀ ಶ್ರೀಗಳವರ ಕೃಪಾಶೀರ್ವಾದದಿಂದ ಮುಂದಿನ ವಿದ್ಯಾಭ್ಯಾಸ ಶ್ರೀಮಠದಲ್ಲೇ ನಡೆಯಿತು. ಕಾಲೇಜಿನ ವ್ಯಾಸಂಗವನ್ನು ತುಮಕೂರಿನ ಸರ್ಕಾರಿ ಕಾಲೇಜಿನಲ್ಲಿ ಮಾಡಿ ಬಿ.ಎಸ್ಸಿ ಪದವಿಯನ್ನು ಪಡೆದರು. ಶ್ರೀಗಳವರ ಆಶೀರ್ವಾದದಿಂದ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಉನ್ನತ ಪ್ರೌಢಶಾಲೆಯಲ್ಲಿ ಸಹಶಿಕ್ಷಕರಾಗಿ ತಮ್ಮ ವೃತ್ತಿಯನ್ನು ಪ್ರಾರಂಭಿಸಿದರು. ನಂತರ 1969ರಲ್ಲಿ ಬಿ.ಎಡ್. ಪದವಿಯನ್ನು ಬೆಂಗಳೂರಿನ ವಿಶ್ವವಿದ್ಯಾಲಯದಲ್ಲಿ ಪಡೆದರು. ತಮ್ಮ 33 ವರ್ಷದ ಸೇವಾವೃತ್ತಿಯಲ್ಲಿ 21 ವರ್ಷಗಳ ಕಾಲ ಸಹಶಿಕ್ಷಕರಾಗಿ ನಂತರ 1984ರಲ್ಲಿ ಮುಖ್ಯೋಪಾಧ್ಯಾಯರಾಗಿ ಬಡ್ತಿ ಪಡೆದು ಕ್ಯಾತ್ಸಂದ್ರದ ನಿವೇದಿತಾ ಪ್ರೌಢಶಾಲೆಯಲ್ಲಿ ಸೇವೆ ಪ್ರಾರಂಭಿಸಿದರು. ನಂತರ ಹರಳೂರು ಹಾಗೂ ಶ್ರೀ ಕ್ಷೇತ್ರದ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆ ಮುಖ್ಯೋಪಾಧ್ಯಾಯರಾಗಿ ಸುಮಾರು 12 ವರ್ಷಗಳ ಕಾಲ ಸೇವೆ ಸಲ್ಲಿಸಿ 1997 ಜನವರಿ 4ರಲ್ಲಿ ನಿವೃತ್ತಿಯನ್ನು ಹೊಂದಿದರು.

ನಿವೃತ್ತಿಯ ನಂತರ ಶ್ರೀಗಳ ಆಶೀರ್ವಾದದಿಂದ ಶ್ರೀ ಮಠಕ್ಕೆ ಸಂಬಂಧಪಟ್ಟ ಶಾಲೆಗಳಿಗೆ ವಿಜ್ಞಾನ ವಿಷಯದ ಪರಿವೀಕ್ಷಕರಾಗಿ ನೇಮಿಸಲ್ಪಟ್ಟರು. ಹಾಗೂ ಶ್ರೀಯುತರು ಶ್ರೀಮಠದಲ್ಲಿ ನಡೆಯುವ ಕೃಷಿ ಹಾಗೂ ಕೈಗಾರಿಕಾ ವಸ್ತು ಪ್ರದರ್ಶನದಲ್ಲಿ ರಂಗಮಂಟಪದ ವ್ಯವಸ್ಥಾಪಕರಾಗಿ ಮತ್ತು ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕದಲ್ಲಿ ಪೂಜಾರಿ ಪಾತ್ರವನ್ನು ನಿರ್ವಹಿಸುತ್ತಿದ್ದರು. ಶ್ರೀಯುತರು ಮಿತಭಾಷಿಗಳು, ಸ್ನೇಹಪರರೂ ಆಗಿದ್ದರು. ಶ್ರೀಯುತರ ಆತ್ಮಕ್ಕೆ ಬಸವಾದಿ ಶರಣರು ಮತ್ತು ಶ್ರೀ ಸಿದ್ಧಗಂಗಾ ಗುರುಪರಂಪರೆ ಚಿರಶಾಂತಿಯನ್ನು ನೀಡಲೆಂದು ಆಶಿಸುತ್ತದೆ. ಕುಟುಂಬ ವರ್ಗದವರಿಗೆ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಆಶೀರ್ವದಿಸಲೆಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.





## ಶ್ರೀ ಸಿದ್ಧಗಂಗಾ ಮಠದ ದಾಸೋಹ ನಿಧಿ

### ಅನ್ನದಾನಕ್ಕೊಂದು ಅಪೂರ್ವ ಅವಕಾಶ

'ಅನ್ನಾದ್ಭವಂತಿ ಭೂತಾನಿ ಅಂದರೆ ಅನ್ನದಿಂದಲೇ ಸಕಲ ಜೀವಿಗಳ ಉತ್ಪತ್ತಿ.'
'ಅನ್ನದಾನಕ್ಕಿಂತ ಇನ್ನು ದಾನವಿಲ್ಲ'

ಶ್ರೀಮಠದಲ್ಲಿ ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರ, ತಮಿಳುನಾಡು ಪ್ರಾಂತ್ಯಗಳಿಂದ ಅಧ್ಯಯನಕ್ಕೆ ಮಕ್ಕಳು /ವಿದ್ಯಾರ್ಥಿಗಳ ಸಂಖ್ಯೆ 8000 ಮುಟ್ಟಿದೆ. ಇಲ್ಲಿ ಜಾತಿ ಭೇದವಿಲ್ಲ. ಪ್ರತಿದಿನ ಮಕ್ಕಳ ಪೋಷಕರು, ಪ್ರವಾಸಿಗರು ಶ್ರೀಕ್ಷೇತ್ರದ ಭಕ್ತರು ಸಹಸ್ರಾರು ಮಂದಿ ಆಗಮಿಸುತ್ತಾರೆ. ಎಲ್ಲರಿಗೂ ದಾಸೋಹ ನಡೆಯಬೇಕು. ಸ್ವಂತ ಆಸ್ತಿ ಬೆಂಬಲವಿಲ್ಲ. ಶ್ರೀ ಶ್ರೀಗಳವರ ಆತ್ಮಬಲ ಮತ್ತು ಭಕ್ತರ ಬೆಂಬಲದ ಮೇಲೆ ಈ ಕಾರ್ಯ ನಡೆಯುತ್ತಿದೆ. ಈ ದಾಸೋಹ ಸೇವೆಯಲ್ಲಿ ಪಾಲ್ಗೊಳ್ಳುವ ಅಪೂರ್ವ ಅವಕಾಶವನ್ನು ಶ್ರೀಗಳವರು ಅನುಗ್ರಹಿಸಿದ್ದಾರೆ.

ಈ ಯೋಜನೆಯಂತೆ ಮಹನೀಯರು ಕೊನೆಯ ಪಕ್ಷ ರೂ. 2000/- ಕಡಿಮೆಯಿಲ್ಲದಂತೆ ಶ್ರೀಮಠದ ದಾಸೋಹನಿಧಿಗೆ ಅರ್ಪಿಸಬೇಕು. ಇದನ್ನು ಶಾಶ್ವತ ನಿಧಿಯನ್ನಾಗಿ ಇಟ್ಟು (ಎಫ್.ಡಿ.) ಅದರ ಬಡ್ಡಿ ಹಣವನ್ನು ದಾಸೋಹಕ್ಕೆ ಬಳಸಲಾಗುವುದು.

**No.: DIT/E/80G** ಪ್ರಕಾರ ಆದಾಯ ತೆರಿಗೆ ವಿನಾಯಿತಿ ಇದೆ.

ಶ್ರೀಮಠದ ಭಕ್ತಮಂಡಳಿ ಪರವಾಗಿ

**ಈ ಪುಣ್ಯಕಾರ್ಯಫಲದ ಶ್ರೀ ಸಿದ್ಧಗಂಗಾ ಮಠದ ದಾಸೋಹ ನಿಧಿಗೆ ಅರ್ಪಿಸಿರುವವರ ವಿಳಾಸ**
(ಮುಂದುವರೆದುದು)

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ | ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|---|---|---|
| 3364. | ಶ್ರೀಮತಿ ಎಂ.ಎಸ್. ಶಶಿಕಲ<br>2ನೇ ಕ್ರಾಸ್, ಉಪ್ಪಾರಹಳ್ಳಿ, ತುಮಕೂರು. | 1,000.00 | 3375. | ಶ್ರೀ ಎಂ.ಆರ್. ಪರಮೇಶ್ವರಸ್ವಾಮಿ, ಉಪನ್ಯಾಸಕರು<br>ಡಿಟೋ ಕಾಲೇಜು. | 500.00 |
| 3365. | ಶ್ರೀ ಡಿ.ಪಿ. ಕೆಂಚೇಗೌಡ<br>ದಂಟರಿಮಕ್ಕಿ, ಚಿಕ್ಕಮಗಳೂರು. | 1,000.00 | 3376. | ಶ್ರೀ ಚಂದ್ರಶೇಖರಯ್ಯ, ದೈ.ಶಿ.ಶಿಕ್ಷಕರು<br>ಡಿಟೋ ಕಾಲೇಜು. | 500.00 |
| 3366. | ಶ್ರೀ ತಿ ಕೆ. ಗಂಗಣ್ಣ<br>ಕನಕಗಿರಿ, ವಿದ್ಯಾರಣ್ಯಪುರಂ, ಮೈಸೂರು. | 1,000.00 | 3377. | ಶ್ರೀಮತಿ ಬಿ.ಎಸ್.ವಿಮಲ, ಗ್ರಂಥಪಾಲಕರು,<br>ಡಿಟೋ ಕಾಲೇಜು. | 500.00 |
| 3367. | ಶ್ರೀ ಎನ್. ನಂದೀಶ್ ಮತ್ತು ರಶ್ಮಿ<br>4ನೇ ಮೈನ್, ಚೋಳೂರು ಪಾಳ್ಯ, ಬೆಂಗಳೂರು. | 1,000.00 | 3378. | ಶ್ರೀ ನರಸಿಂಹಮೂರ್ತಿ, ಪ್ರ.ದ.ಸ.<br>ಡಿಟೋ ಕಾಲೇಜು. | 500.00 |
| 3368. | ಡಾ॥ ಸಿ.ಸದಾಶಿವಯ್ಯ,<br>ಉಪಪ್ರಾಧ್ಯಾಪಕರು, ಎಸ್.ಐ.ಟಿ. ತುಮಕೂರು. | 7,000.00 | 3379. | ಶ್ರೀ ಕೆ.ಜಿ. ಪ್ರೇಮ್‌ಕುಮಾರ್, ದ್ವಿ.ದ.ಸ.<br>ಡಿಟೋ ಕಾಲೇಜು. | 500.00 |
| 3369. | ಶ್ರೀ ಎನ್. ಚಂದ್ರಶೇಖರ್<br>ಟೆಂಪಲ್ ರಸ್ತೆ, ಮಲ್ಲೇಶ್ವರಂ, ಬೆಂಗಳೂರು. | 2,001.00 | 3380. | ಶ್ರೀ ಎಂ.ಎಸ್. ಸರೋಜ. ಸಿಸಿಟಿ.<br>ಡಿಟೋ ಕಾಲೇಜು. | 500.00 |
| 3370. | ಶ್ರೀ ಎಂ.ಪಿ. ಶಶಿಧರ ಬಿನ್ ಗಂಗಾಧರಯ್ಯ<br>ಗಾಂಧಿನಗರ, ಶಿವಮೊಗ್ಗ. | 1,001.00 | 3381. | ಶ್ರೀಮತಿ ಕೆ.ಮಮತ, ದ್ವಿ.ದ.ಸ.<br>ಡಿಟೋ ಕಾಲೇಜು. | 500.00 |
| 3371. | ಶ್ರೀ ಆರ್. ಬಿ. ಯೋಗನಂದಯ್ಯ<br>ಅಶೋಕನಗರ, ಬೆಳಗಾಂ | 5,001.00 | 3382. | ಶ್ರೀ ಕೆ.ಹೆಚ್. ಶಾಂತಕುಮಾರ್, ಸಹಾಯಕರು<br>ಡಿಟೋ ಕಾಲೇಜು. | 500.00 |
| 3372. | ಕು॥ ರಮ್ಯ ಬಿ.ಬಿ.<br>ಪೈಪ್‌ಲೈನ್ ರಸ್ತೆ, ವಿಜಯನಗರ, ಬೆಂಗಳೂರು. | 2,001.00 | 3383. | ಶ್ರೀ ಟಿ. ರಾಜಗೋಪಾಲ 'ಡಿ' ಗ್ರೂಪ್ ನೌಕರ<br>ಡಿಟೋ ಕಾಲೇಜು. | 500.00 |
| 3373. | ಶ್ರೀ ಮಂಚೇಗೌಡ, ಉಪನ್ಯಾಸಕರು, ಶ್ರೀ ಸ್ವಾಮಿ ವಿವೇಕಾನಂದ<br>ಪ.ಪೂ. ಕಾಲೇಜು, ತುರುವೇಕೆರೆ ತಾ. | 500.00 | 3384. | ಶ್ರೀ ಎಸ್.ಎನ್. ನಜೀರ್‌ಸಾಬ್, 'ಡಿ' ಗ್ರೂಪ್ ನೌಕರ<br>ಡಿಟೋ ಕಾಲೇಜು. | 500.00 |
| 3374. | ಶ್ರೀ ಬಿ.ವೈ. ತಿಮ್ಮೇಗೌಡ, ಉಪನ್ಯಾಸಕರು<br>ಡಿಟೋ ಕಾಲೇಜು. | 500.00 | 3385. | ಶ್ರೀ ಎನ್. ಮಲ್ಲೇಶಪ್ಪ, 'ಡಿ' ಗ್ರೂಪ್ ನೌಕರ<br>ಡಿಟೋ ಕಾಲೇಜು. | 500.00 |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3386. | ಶ್ರೀ ಹೆಚ್.ಎ. ನಟರಾಜು, ಮುಖ್ಯ ಶಿಕ್ಷಕರು, ಶ್ರೀ ಶಾ. ಸಂ. ಪಾ.ಶಾಲಾ, ತಂಡಗ, ತುರುವೇಕೆರೆ ತಾ. | 2000.00 |
| 3387. | ಶ್ರೀ ಕೆ. ಗಂಗಧರನ್ 5ನೇ ಬ್ಲಾಕ್, ಕೋರಮಂಗಲ, ಬೆಂಗಳೂರು. | 1000.00 |
| 3388. | ಶ್ರೀ ಎಸ್.ಎನ್. ಅಂಕಣ್ಣರೆಡ್ಡಿ 80 ಅಡಿ ರಸ್ತೆ, ಕೋರಮಂಗಲ, ಬೆಂಗಳೂರು. | 1001.00 |
| 3389. | ಶ್ರೀ ಶಿವರಾಜು, ಸಹಶಿಕ್ಷಕರು ಶ್ರೀ. ಸಿ. ಗ್ರಾ.ಪ್ರೌ.ಶಾಲೆ. ಹೆಡಕನಹಳ್ಳಿ, ಬೆಂ.ಗ್ರಾ.ಜಿ. | 2001.00 |
| 3390. | ಶ್ರೀ ಜಿ. ನಾರಾಯಣಸ್ವಾಮಿ, ಸಹಶಿಕ್ಷಕರು ಶ್ರೀ. ಸಿ. ಗ್ರಾ.ಪ್ರೌ.ಶಾಲೆ. ಹೆಡಕನಹಳ್ಳಿ, ಬೆಂ.ಗ್ರಾ.ಜಿ. | 1001.00 |
| 3391. | ಶ್ರೀ ಎನ್. ವೀರಭದ್ರಯ್ಯ, ಬನ್ನಿಗನಹಳ್ಳಿ, ದೂರವಾಣಿ ನಗರ, ಬೆಂಗಳೂರು. | 1001.00 |
| 3392. | ಶ್ರೀ ಎಸ್. ಬಾಲಗಂಗಾಧರಯ್ಯ ಶ್ರೀ. ಸಿ. ಗ್ರಾ.ಪ್ರೌ.ಶಾಲೆ. ಹೆಡಕನಹಳ್ಳಿ, ಬೆಂ.ಗ್ರಾ.ಜಿ. | 1000.00 |
| 3393. | ಶ್ರೀ ನಾಗರಾಜು, ಸಹಶಿಕ್ಷಕರು, ಶ್ರೀ. ಮ. ಗ್ರಾ.ಪ್ರೌ.ಶಾಲೆ. ಕುದೂರು, ಮಾಗಡಿ ತಾ, ಬೆಂ.ಗ್ರಾ.ಜಿ. | 2001.00 |
| 3394. | ಶ್ರೀ ಸಂಗಪ್ಪ, ಹಿಂದಿ ಶಿಕ್ಷಕರು, ಶ್ರೀ. ಉ.ಶಿ.ಗ್ರಾ.ಪ್ರೌ.ಶಾಲೆ. ಗಟ್ಟೀಪುರ, ಮಾಗಡಿ ತಾ, ಬೆಂ.ಗ್ರಾ.ಜಿ. | 2000.00 |
| 3395. | ಶ್ರೀ ಆರ್. ಗರುಡಯ್ಯ, ದೈ. ಶಿಕ್ಷಕರು, ಶ್ರೀ. ಸಿ. ಗ್ರಾ.ಪ್ರೌ.ಶಾಲೆ. ನಾರಸಂದ್ರ, ಮಾಗಡಿ ತಾ, ಬೆಂ.ಗ್ರಾ.ಜಿ. | 2001.00 |
| 3396. | ಶ್ರೀ ಎಂ.ನಾಗರಾಜು, 'ಡಿ' ಗ್ರೂಫ್ ನೌಕರ ಶ್ರೀ.ಶಾ. ಪ್ರೌ.ಶಾಲೆ, ತಂಡಗ, ತುರುವೇಕೆರೆ ತಾ. | 1001.00 |
| 3397. | ಶ್ರೀ ಕೆ. ವೀರಪ್ಪ ಕೆಂಚಮ್ಮನಹಳ್ಳಿ, ಇಟ್ಟಿಗಿ ಹೊ. ಹೆಚ್.ಹಡಗಲಿ ತಾ. | 1001.00 |
| 3398. | ಶ್ರೀ ಜಿ.ಸಿದ್ದನಂಜಪ್ಪ ಬಿನ್ನಿ ಲೇಔಟ್, ಅತ್ತಿಗುಪ್ಪೆ, ವಿಜಯನಗರ, ಬೆಂ. | 2001.00 |
| 3399. | ಶ್ರೀ ಆರ್. ನಂಜಪ್ಪ, ಸಹಶಿಕ್ಷಕರು, ಗ್ರಾ.ಪ್ರೌ.ಶಾಲೆ, ಬೆಳಧರ, ತುಮಕೂರು ತಾ. | 1000.00 |
| 3400. | ಶ್ರೀಮತಿ ರೇಶ್ಮಾ ತಾಜ್ ಟಿ.ಸಹಶಿಕ್ಷಕರು, ಶ್ರೀ ಸಿ.ಗ್ರಾ. ಪ್ರೌ.ಶಾಲೆ, ರಘುವನಹಳ್ಳಿ, ಬೆಂ.ಜಿ. | 2001.00 |
| 3401. | ಶ್ರೀ ಜಿ.ಬಿ. ಸೋಮಸುಂದ್ರಪ್ಪ, ಸಹಶಿಕ್ಷಕರು, ಶ್ರೀ ಮಾ.ಗ್ರಾ. ಪ್ರೌ.ಶಾಲೆ, ಹೊಸಹಳ್ಳಿ, ಪಾವಗಡ ತಾ. | 2001.00 |
| 3402. | ಶ್ರೀಮತಿ ಜಿ. ಶಾಂತಾಬಾಯಿ, ಹಿಂದಿ ಶಿಕ್ಷಕರು, ಶ್ರೀ ಮಾ.ಗ್ರಾ. ಪ್ರೌ.ಶಾಲೆ, ಹೊಸಹಳ್ಳಿ, ಪಾವಗಡ ತಾ. | 2001.00 |
| 3403. | ಶ್ರೀ ಕೆ.ಬಿ. ರೇಣುಕಯ್ಯ, ಪ್ರ.ಶಿ. ಶ್ರೀ ಬ. ಶಿ. ತರಬೇತಿ ಸಂಸ್ಥೆ, ಶ್ರೀ ಸಿದ್ಧಗಂಗಾ ಮಠ. | 2000.00 |
| 3404. | ಶ್ರೀ ವೀರಾಪುರ ಜಂಬಣ್ಣ ಬಿನ್ ಪರಮೇಶ್ವರಪ್ಪ ಬಾವಿಹಳ್ಳಿ, ವಲಗುಂಡಿ ಅಂ. ಹೂ.ಹಡಗಲಿ ತಾ. | 2001.00 |
| 3405. | ಶ್ರೀ ಶಿವಯ್ಯ ಎಲ್.ಎನ್. ಕಾಲೋನಿ, ಯಶವಂತಪುರ. | 2000.00 |
| 3406. | ಶ್ರೀಮತಿ ವೆಂಕಟೇಶಮ್ಮ ಮಂಜುನಾಥನಗರ, ಬೆಂಗಳೂರು. | 1000.00 |
| 3406. | ಶ್ರೀ ಈರಂಗಪ್ಪ, ಅಕ್ಕಯ್ಯಮ್ಮ ಕತ್ರಿಗುಪ್ಪ ಬಸ್‌ಸ್ಟಾಂಡ್ ಎದುರು, ಬೆಂಗಳೂರು. | 2001.00 |
| 3407. | ಡಾ। ಎಸ್. ಚಂದ್ರಶೇಖರನ್ ಹೆಚ್.ಎಂ.ಟಿ. ಲೇಔಟ್, ವಿದ್ಯಾರಣ್ಯಪುರ, ಬೆಂಗಳೂರು. | 2001.00 |
| 3408. | ಶ್ರೀ ವಿ.ಜಿ. ರಮೇಶ್, ಸ.ಶಿ. ಶ್ರೀ.ಸಿ.ಗ್ರಾ.ಪ್ರೌ.ಶಾಲೆ, ಗಂಜಲಗುಂಟೆ, ಮಧುಗಿರಿ ತಾ. | 2001.00 |
| 3409. | ಶ್ರೀ ಸಿ.ಎಸ್. ವಿನಯ್ ಬಿನ್ ಚನ್ನಬಸವರಾಜು, ಎಸ್.ಆರ್.ಎಸ್. ಬಿಲ್ಡಿಂಗ್. ಬಸ್‌ನಿಲ್ದಾಣ, ತುಮಕೂರು. | 5001.00 |
| 3410. | ಶ್ರೀ ಎ.ಎಸ್. ಗುರುಸ್ವಾಮಿ ಶ್ರೀ.ಸಿ. ಪ್ರೌ.ಶಾಲೆ, ಶಿವನಹಳ್ಳಿ, ಬೆಂಗಳೂರು. | 2001.00 |
| 3411. | ಡಾ॥ ಸಿ. ಸದಾಶಿವಯ್ಯ, ಉಪಪ್ರಾಧ್ಯಾಪಕರು, ಸಿವಿಲ್ ವಿಭಾಗ, ಎಸ್.ಐ.ಟಿ. ತುಮಕೂರು. | 5000.00 |
| 3412. | ಶ್ರೀ ಶಿವಣ್ಣ, ಮೆಕ್ಯಾನಿಕ್ ಕೆಮಿಕಲ್ ವಿಭಾಗ, ಎಸ್.ಐ.ಟಿ. ತುಮಕೂರು. | 1001.00 |
| 3413. | ಶ್ರೀ ಬಿ.ಎನ್. ರಾಮಮೂರ್ತಿ, ಸಹಶಿಕ್ಷಕರು, ಶ್ರೀ.ಅ.ಕ.ಹಿ.ಪ್ರಾ.ಶಾಲೆ, ಅಂಬಿಕಾ ನಗರ, ಬೆಂಗಳೂರು. | 2001.00 |
| 3414. | ಶ್ರೀ ಸಿ.ಪಿ. ನಾಗರಾಜ, ಬಿ.ಇ.ಎಂ.ಎಲ್ 3ನೇ ಸ್ಟೇಜ್, ರಾಜರಾಜೇಶ್ವರಿ ನಗರ, ಬೆಂಗಳೂರು. | 700.00 |
| 3415. | ಶ್ರೀಮತಿ ಜೆ.ಎಸ್. ಸುಜಾತಲೋಕಯ್ಯ ಮತ್ತು ಮಕ್ಕಳು ಸಂತೆಬೆನ್ನೂರು, ಚೆನ್ನಗಿರಿ ತಾ, ದಾವಣಗೆರೆ ಜಿಲ್ಲೆ. | 1001.00 |
| 3416. | ಶ್ರೀಮತಿ ನಸೀಮ್ ಉನ್ನೀಸಾ, ಹಿಂ.ಶಿ. ಶ್ರೀ.ಸಿ.ಪ್ರೌ.ಶಾಲೆ, ಹೆಡಕನಹಳ್ಳಿ, ಹೊಸಕೋಟೆ ತಾ.ಬೆಂ.ಗ್ರಾ. | 2001.00 |
| 3417. | ಶ್ರೀ ಎಂ.ಸಿ. ರವಿಕುಮಾರ್, ಬೈರಕೂರು, ಮುಳಬಾಗಿಲು ತಾ, ಕೋಲಾರ ಜಿ. | 100.00 |
| 3418. | ಶ್ರೀ ಶಂಭುಲಿಂಗಪ್ಪ ಗ್ರೂಪ್ 'ಡಿ' ನೌಕರ, ಶ್ರೀ. ಬ.ಶಿ. ತ. ಸಂಸ್ಥೆ, ಶ್ರಿ ಸಿದ್ಧಗಂಗಾ ಮಠ. | 1000.00 |
| 3419. | ಶ್ರೀಮತಿ ಮಂಗಳಮ್ಮ, ಪ್ರ.ಶಾ.ಸ. ಶ್ರೀ. ಬ.ಶಿ. ತ. ಸಂಸ್ಥೆ, ಶ್ರಿ ಸಿದ್ಧಗಂಗಾ ಮಠ. | 1000.00 |
| 3420. | ಶ್ರೀ ಎನ್. ವೀರಭದ್ರಯ್ಯ ಚೆನ್ನಿಗನಹಳ್ಳಿ, ದೂರವಾಣಿ ನಗರ, ಬೆಂಗಳೂರು. | 1000.00 |
| 3421. | ಶ್ರೀ ಪರಮಶಿವಯ್ಯ, ಇನ್‌ಕಮ್ ಟ್ಯಾಕ್ಸ್ ಕಾಲೋನಿ, ವಿಜಯನಗರ, ಬೆಂಗಳೂರು. | 2000.00 |
| 3422. | ಶ್ರೀಮತಿ ಎಂ. ರತ್ನ ಡಾ॥ ಎಸ್. ಸಿದ್ದಪ್ಪ ಎಂ.ಸಿ. ಲೇಔಟ್. ವಿಜಯನಗರ, ಬೆಂಗಳೂರು. | 5000.00 |
| 3423. | ಡಾ॥ ಬಿ.ಡಿ. ಶಶಿಧರ್, ಫಿಸಿಶಿಯನ್& ಕಾರ್ಡಿಯಾಲಜಿಸ್ಟ್ ರಿಪಬ್ಲಿಕ್ ಹಾಸ್ಪಿಟಲ್, ಬೆಂಗಳೂರು. | 5000.00 |
| 3420. | ಶ್ರೀ ಬಸಯ್ಯ, ಪಿನ್ನೇಪಲ್ಲಿ, ಧರ್ಮಾವರಂ, ಅನಂತಪುರ ಜಿ. ಆಂದ್ರಪ್ರದೇಶ. | 50 ಡಾಲರ್ಸ್ |
| 3421. | ಶ್ರೀ ಜಿ.ಎಂ. ನರಸಿಂಹಮೂರ್ತಿ, ಹಿಂ.ಶಿ. ಶ್ರೀ.ಸಿ.ಗ್ರಾ.ಪ್ರೌ.ಶಾ. ಗುಡೇಮಾರನಹಳ್ಳಿ, ಬೆಂಗಳೂರು. | 2000.00 |
| 3422. | ಶ್ರೀ ಎಲ್. ಷಣ್ಮುಖ, ಕೃಷ್ಣಪ್ಪ ಲೇಔಟ್, ನಾಗಶೆಟ್ಟಿಹಳ್ಳಿ, ಬೆಂಗಳೂರು. | 2000.00 |
| 3423. | ಶ್ರೀ ಟಿ.ಎಸ್. ಜಯಪ್ರಭು, ಸ.ಶಿ. ಶ್ರೀ ಸಿ.ಗ್ರಾ.ಪ್ರೌ.ಶಾಲೆ, ಹೆಡಕನಹಳ್ಳಿ, ಬೆಂಗಳೂರು. | 1001.00 |
| 3424. | ಶ್ರೀ ಮೂರ್ತಿ, ಸ.ಶಿ. ಶ್ರೀ ಸಿ.ಪ.ಪೂ. ಕಾಲೇಜು, ಬೂದಿಗೆರೆ, ದೇವನಹಳ್ಳಿ ತಾ॥, ಬೆಂಗಳೂರು ಗ್ರಾ.ಜಿ. | 2000.00 |





| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3425. | ಶ್ರೀ ವೆಂಕಟೇಶಯ್ಯ ಟಿ.ಕೆ. ಶ್ರೀ ಸಿ.ಪ.ಪೂ. ಕಾಲೇಜು, ದೇವನಹಳ್ಳಿ ತಾ॥, ಬೆಂಗಳೂರು ಗ್ರಾ.ಜಿ. | 2000.00 |
| 3426. | ಶ್ರೀ ನರಸಿಂಹಮುರ್ತಿ, ಗ್ರೂಪ್ ಡಿ ನೌಕರರು, ಶ್ರೀ ಸಿ.ಪ.ಪೂ. ಕಾಲೇಜು, ದೇವನಹಳ್ಳಿ ತಾ॥, ಬೆಂಗಳೂರು ಗ್ರಾ.ಜಿ. | 2000.00 |
| 3427. | ಶ್ರೀಮತಿ ಮಂಜುಳ, ವೈಯ್ಯಾಲಿಕಾವಲ್, ಮಲ್ಲೇಶ್ವರಂ. ಬೆಂಗಳೂರು. | 1005.00 |
| 3428. | ಶ್ರೀ ನಾಗರಾಜು ಬಿನ್ ಬಸವರಾಜಪ್ಪ ಗಣಪತಿ ಏಜೆನ್ಸಿಸ್, ಬಿ.ಹೆಚ್. ರಸ್ತೆ, ನೆಲಮಂಗಲ | 501.00 |
| 3429. | ಶ್ರೀ ಜಿ.ಎಸ್. ಪಂಚಾಕ್ಷರಿ, ಬಿ.ಡಿ.ಎ. ನಾಗರಭಾವಿ, ಬೆಂಗಳೂರು. | 6000.00 |
| 3430. | ಶ್ರೀ ಹೊನ್ನಪ್ಪ ಮಾಗಡಿ ರಸ್ತೆ., ವಿಶ್ವನೀಡಂ ಅಂ. ಬೆಂಗಳೂರು. | 2500.00 |
| 3431. | ಶ್ರೀ ಜಿ. ಹೊನ್ನಗಂಗಯ್ಯ ನಿ.ಮು.ಶಿ. ಕುದೂರು, ಮಾಗಡಿ ತಾ. ಬೆಂ.ಗ್ರಾ.ಜಿಲ್ಲೆ. | 1000.00 |
| 3432. | ಶ್ರೀ ಜಿ. ನಂಜುಂಡಯ್ಯ ಬಿನ್ ದೊಡ್ಡಬಸವಯ್ಯ ಹನುಮಂತಪುರ, ತುಮಕೂರು. | 1000.00 |
| 3433. | ಶ್ರೀಮತಿ ಚೆನ್ನಮ್ಮ ಕೋಂ. ರಂಗೇಗೌಡ ತಿಪಟೂರು. | 1000.00 |
| 3434. | ಶ್ರೀ ಎಲ್. ರಾಮಣ್ಣ, ಇಟ್ಟಿಗೆ ವ್ಯಾಪಾರಿಗಳು. ಕೆ.ಆರ್. ಬಡಾವಣೆ, ತಿಪಟೂರು ತಾ. | 2001.00 |
| 3435. | ಶ್ರೀ ಎಸ್. ರಾಜಣ್ಣ (ಹೆಚ್.ಎ.ಎಲ್) ಕುರುಬರಹಳ್ಳಿ, ಬೆಂಗಳೂರು. | 1101.00 |
| 3436. | ಶ್ರೀ ಎಂ. ವೀರಣ್ಣ, ಶಿಕ್ಷಕರು, ಚಿಕ್ಕಬೆಳವಂಗಲ, ದೊಡ್ಡಬಳ್ಳಾಪುರ ತಾ. | 2005.00 |
| 3437. | ಶ್ರೀ ಪಿ.ಎಲ್. ಸೋಮಶೇಖರ್, ವಿಜಯನಗರ, ಬೆಂಗಳೂರು. | 5000.00 |
| 3438. | ಶ್ರೀ ವೈ. ನಾಗರಾಜ್, ಯಲಹಂಕ, ನ್ಯೂಟೌನ್, ಬೆಂಗಳೂರು. | 2500.00 |
| 3439. | ಶ್ರೀಮತಿ ಎಂ.ಎಸ್. ಶಶಿಕಲ ಯಲಹಂಕ, ನ್ಯೂಟೌನ್, ಬೆಂಗಳೂರು. | 1000.00 |
| 3440. | ಶ್ರೀ ಬಿ.ಎನ್. ಚಂದ್ರಪ್ಪ, ನಿ. ಶಿಕ್ಷಕರು. ಬೆಟ್ಟಹಲಸೂರು, ಬೆಂ. ಉತ್ತರ ತಾ. | 1000.00 |
| 3441. | ಶ್ರೀ ಅಪ್ಪಣ್ಣಪ್ಪ, ಪೀಣ್ಯಾ ಕೈಗಾರಿಕಾ ಪ್ರದೇಶ, ಪೀಣ್ಯ, ಬೆಂಗಳೂರು. | 5000.00 |
| 3442. | ಲಿಂ. ಬಾಳಯ್ಯ ಮತ್ತು ಶ್ರೀಮತಿ ಗಂಗಮ್ಮ ಕನ್ನಸಂದ್ರ, ಲಕ್ಕೇನಹಳ್ಳಿ, ಸೋಲೂರು ಹೊ. ಬೆಂ.ಗ್ರಾ.ಜಿ. | 2500.00 |
| 3443. | ಶ್ರೀಮತಿ ನಾಗರತ್ನ ಕೆ.ಬಿ. ಸಿದ್ಧಲಿಂಗಯ್ಯ ಸುಬ್ಬಯ್ಯ ಗಾರ್ಡನ್, ವಿಜಯನಗರ, ಬೆಂಗಳೂರು | 2001.00 |
| 3444. | ಶ್ರೀ ಆರ್. ಕೃಷ್ಣಮೂರ್ತಿ, ಮು.ಶಿ. ಶ್ರೀ.ವೀ.ಕ.ಹಿ.ಪ್ರಾ. ಶಾಲೆ, ಅಗ್ರಹಾರದಾಸರಹಳ್ಳಿ, ಬೆಂಗಳೂರು. | 1000.00 |
| 3445. | ಶ್ರೀ ಎನ್. ಅಶ್ವತ್ಥನಾರಾಯಣ, ಸ.ಶಿ. ಡಿಟೋ ಶಾಲೆ. | 1000.00 |
| 3446. | ಶ್ರೀ ಜಿ. ಮೋಹನ್‌ಕುಮಾರ್, ಸ.ಶಿ. ಡಿಟೋ ಶಾಲೆ. | 1000.00 |
| 3447. | ಶ್ರೀ ಎ.ಆರ್. ಮಂಜುನಾಥ್, ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಕೊಕ್ಕಡ, ಬೆಳ್ತಂಗಡಿ, ದ.ಕ.ಜಿ. | 501.00 |
| 3448. | ಮೆ॥ ಸಿದ್ಧಗಂಗಾ ಸನಿವಾಸ ವಿದ್ಯಾಸಂಸ್ಥೆಗಳ ಬಳಕೆದಾರರ ಕೋ.ಆ.ಸೊಸೈಟಿ, ಶ್ರೀ ಸಿದ್ಧಗಂಗಾ ಮಠ. | 8725.00 |
| 3449. | ಶ್ರೀ ಬಿ. ಮಹಲಿಂಗಪ್ಪ ಕನಿತೇನಹಳ್ಳಿ, ಅರಸೀಕೆರೆ ಅಂ. ಹಾಸನ ಜಿಲ್ಲೆ. | 1001.00 |
| 3450. | ಶ್ರೀ ವಿನೋದ್‌ಕುಮಾರ್ ಸೂಲೆಭಾವಿ, ಜಡವಡಿ, ಕೊಲ್ಲಾಪುರ. | 2000.00 |
| 3451. | ಶ್ರೀ ಡಿ. ಲೋಕೇಶ್ವರಪ್ಪ, ವಕೀಲರು, ವಿನೋಬಾನಗರ, ತುಮಕೂರು. | 2000.00 |
| 3452. | ಶ್ರೀ ಚಂದ್ರಶೇಖರಮೂರ್ತಿ, ಬಿನ್ ಲೇಟ್ ಟಿ. ಮಾರಣ್ಣಪ್ಪ ಕೆ.ಎಸ್. ಹುಂಡಿ, ನಂಜನಗೂಡು, ಮೈಸೂರು ಜಿ. | 1001.00 |
| 3453. | ಶ್ರೀ ನಂಜಪ್ಪ, ಟ್ಯಾಂಕ್ ರಸ್ತೆ, ಉಪ್ಪಾರಹಳ್ಳಿ, ತುಮಕೂರು. | 2001.00 |
| 3454. | ಶ್ರೀ ಕೆ.ವಿ. ನಾಗಲಿಂಗಯ್ಯ, ದ್ವಿ.ದ.ಸ ಶ್ರೀ.ಸಿ.ಸ.ಕಾಲೇಜು, ಶ್ರೀ ಸಿದ್ಧಗಂಗಾ ಮಠ. | 2001.00 |
| 3455. | ಶ್ರೀ ಆರ್.ಜೆ. ರೇಣುಕಾರಾಧ್ಯ, ಗ್ರೂಪ್ 'ಡಿ' ನೌಕರರು ಶ್ರೀ.ಸಿ.ಸ.ಕಾಲೇಜು, ಶ್ರೀ ಸಿದ್ಧಗಂಗಾ ಮಠ. | 2001.00 |
| 3456. | ಶ್ರೀ ಗಂಗಭೈರಯ್ಯ ಮತ್ತು ಕುಟುಂಬದವರು ಶಾಂತಿನಗರ, ತುಮಕೂರು. | 1000.00 |
| 3457. | ಶ್ರೀ ಬಿ. ಶಿವಶಂಕರ್ ಮತ್ತು ಕುಟುಂಬದವರು ನೆಲಮಂಗಲ ತಾ., ಬೆಂಗಳೂರು ಗ್ರಾ.ಜಿ. | 5001.00 |
| 3458. | ಶ್ರೀ ವೀರಭದ್ರಪ್ಪ ಈರಪ್ಪ, ಸ.ಶಿ. ಎಂ.ಜಿ. ರಸ್ತೆ, ಬಾಗಲಕೋಟೆ. | 15,000.00 |
| 3459. | ಶ್ರೀ ಬಿ.ಪಿ. ಮಲ್ಲಿಕಾರ್ಜುನಯ್ಯ ಮತ್ತು ಸಹೋದರರು ರಂಗಸಮುದ್ರ, ಪಾವಗಡ ತಾ॥, | 501.00 |
| 3460. | ಶ್ರೀ ಎನ್. ಬಸವರಾಜಪ್ಪ, ಪ್ರಶಿಕ್ಷಕರು, ಶ್ರೀ ಬಸವೇಶ್ವರ ಶಿಕ್ಷಕ ತರಬೇತಿ ಸಂಸ್ಥೆ, ಶ್ರೀಮಠ. | 2001.00 |
| 3461. | ಟಿ.ಎ.ಪಿ.ಸಿ.ಎಂ.ಎಸ್. ಈ ಸಂಘದ ಕೊಡುಗೆ ಹೊಸಕೋಟೆ, ಬೆಂಗಳೂರು ಜಿಲ್ಲೆ. | 5001.00 |
| 3462. | ಶ್ರೀ ಕೆ. ಶಿವಣ್ಣ, ಮುಖ್ಯಶಿಕ್ಷಕರು, ಕಾಗ್ಗೆರೆ, ದೊಡ್ಡನಾರವಂಗಲ ಅಂ. ತುಮಕೂರು. | 2500.00 |
| 3463. | ಶ್ರೀಮತಿ ಸಿ.ಎಸ್. ರಾಜೇಶ್ವರಿ, ಪ್ರಶಿಕ್ಷಕರು ಶ್ರೀ ಸಿದ್ಧಗಂಗಾ ಶಿಕ್ಷಕ ತರಬೇತಿ ಸಂಸ್ಥೆ, ತುಮಕೂರು. | 2001.00 |
| 3464. | ಶ್ರೀ ರಘುನಾಥ್, ಬಿ.ಜೆ.ಪಿ. ಪಕ್ಷದ ಅಧ್ಯಕ್ಷರು, ರಾಜಾಜಿನಗರ, ಬೆಂಗಳೂರು. | 2500.00 |
| 3465. | ಶ್ರೀ ದಯಾನಂದ ಪೈ, ಲ.ನಾ. ಕಾಂಪ್ಲೆಕ್ಸ್, ಪ್ಯಾಲೇಸ್ ರಸ್ತೆ, ಬೆಂಗಳೂರು. | 2500.00 |
| 3466. | ಶ್ರೀಮತಿ ಸುಶೀಲಮ್ಮ ಮತ್ತು ಎನ್.ಸಿ. ಬಸವರಾಜ್ ರಾಜಾನುಕುಂಟೆ, ಬೆಂಗಳೂರು ಉ.ತಾ., | 1001.00 |
| 3467. | ಶ್ರೀ ಕೆ.ಸಿ. ಹನುಮಂತಪ್ಪ ಅಮೃತಹಳ್ಳಿ, ಯಲಹಂಕ, ಬೆಂಗಳೂರು. | 2000.00 |
| 3468. | ಶ್ರೀ ಕೆ.ಎಸ್. ಜೈಶಂಕರ್, ದೈ.ಶಿ. ಶಿಕ್ಷಕರು, ಬೆಳಧರ ಗ್ರಾಮಾಂತರ ಪ್ರೌಢಶಾಲೆ, ಬೆಳಧರ. | 2001.00 |
| 3469. | ಶ್ರೀ ಕೆ.ಎಸ್. ಶಿವರುದ್ರಯ್ಯ, ಕಲ್ಯಾಣಿನಗರ, ನಾಗರಭಾವಿ ರಸ್ತೆ, ಬೆಂಗಳೂರು. | 2000.00 |
| 3470. | ಶ್ರೀ ಬಿ. ಮಹದೇವಯ್ಯ ಶ್ರೀ.ಸಿ.ಗ್ರಾ. ಪ್ರೌ.ಶಾಲೆ., ಗುಡೇಮಾರನಹಳ್ಳಿ, | 1000.00 |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3471. | ಶ್ರೀ ಎಸ್.ಬಿ. ಗಂಗಣ್ಣ, ಪ್ರಾಂಶುಪಾಲರು, ಶ್ರೀ.ಸಿ.ಸ.ಪ.ಪೂ. ವಿದ್ಯಾಲಯ, ಬೂದಿಗೆರೆ. | 2000.00 |
| 3472. | ಶ್ರೀ ಡಿ. ನಾಗರಾಜ್ ದೊಡ್ಡಕಲ್ಲಸಂದ್ರ, ಬೆಂಗಳೂರು. | 1501.00 |
| 3473. | ಶ್ರೀಮತಿ ಸುಶೀಲಮ್ಮ ಕೇರಾಫ್ ನಿರಂಜನ ಗಾಂಧಿನಗರ, ಶಿವಮೊಗ್ಗ. | 2001.00 |
| 3474. | ಶ್ರೀ ಮಹಂತೇಶ್ ಡಿ.ಮಗಿ. ಗುಡೂರ, ಹುನಗುಂದ ತಾ., ಬಾಗಲಕೋಟೆ ಜಿ. | 2001.00 |
| 3475. | ಶ್ರೀ ಮೋಹನ್ ಬಿನ್ ವೀರಣ್ಣ ವೆಂಗಲಮ್ಮನಹಟ್ಟಿ, ಪಾತಗಾನಹಳ್ಳಿ, ಕೊರಟಗೆರೆ ತಾ. | 1001.00 |
| 3476. | ಶ್ರೀ ಕೆ.ಬಿ. ಜಯಣ್ಣ, ಕಾರ್ಯದರ್ಶಿಗಳು, ವಿದ್ಯಾವಾಹಿನಿ ವಿದ್ಯಾಸಂಸ್ಥೆಗಳು, ತುಮಕೂರು. | 5001.00 |
| 3477. | ಶ್ರೀ ಜಿ.ಎಸ್. ಸಿದ್ಧಲಿಂಗಪ್ಪ ಅಜಾದ್‌ನಗರ, ಬೆಂಗಳೂರು. | 1000.00 |
| 3478. | ಮೆ. ಎಸ್.ವಿ.ಎಸ್. ಕಾರ್ಪೊರೇಷನ್ ಯಲಹಂಕ ಸ್ಯಾಟಲೈಟ್ ಟೌನ್, ಬೆಂಗಳೂರು. | 5005.00 |
| 3479. | ಶ್ರೀ ಜಿ.ಪರಮೇಶ್ವರಪ್ಪ ಬಿನ್ ಗಂಗಪ್ಪ, ಬನಶಂಕರಿ, ಎಸ್.ಎಸ್.ಕೆ.ಲೇಔಟ್, ಬೆಂಗಳೂರು. | 3001.00 |
| 3480. | ಶ್ರೀ ಬಿ. ಶ್ರೀನಿವಾಸನ್, ಸಹಶಿಕ್ಷಕರು, ಶ್ರೀ. ಅ.ಕ.ಹಿ.ಪ್ರಾ.ಶಾಲೆ, ನಂದಿನಿ ಬಡಾವಣೆ, ಬೆಂಗಳೂರು. | 2000.00 |
| 3481. | ಶ್ರೀ ಎಸ್. ಎಸ್. ಸಂಕಣ್ಣನವರ, ಸ.ಶಿ. ಶ್ರೀ.ಸಿ.ಗ್ರಾ.ಪ್ರೌ.ಶಾ. ಗುಡೇಮಾರನಹಳ್ಳಿ, ಮಾಗಡಿ. | 1500.00 |
| 3482. | ಶ್ರೀ ಜಿ.ಸಿ.ನಾಗರಾಜು, ದ್ವಿ.ದ.ಸ. ಶ್ರೀ.ಸಿ.ಸ.ಪ.ಪೂ.ಕಾಲೇಜು, ಹಾಲನೂರು. | 1001.00 |
| 3483. | ಶ್ರೀಮತಿ ಬಿ.ಬಿ. ಪುಷ್ಪಾವತಿ ಎಂ.ಎಸ್. ಪರಮಶಿವಗೌಡರು ಅಂಕಿಹಳ್ಳಿ, ಬೇಲೂರು ತಾ., | 2001.00 |
| 3484. | ಶ್ರೀ ಎಂ. ಮಲ್ಲಪ್ಪ, ಮ್ಯಾನೇಜರ್ ಇಂಡಿಯನ್ ಬ್ಯಾಂಕ್, ಗುಲ್ಬರ್ಗಾ. | 501.00 |
| 3485. | ಶ್ರೀ ಶಿವಯೋಗಿ ಸಿದ್ಧರಾಮಸ್ವಾಮಿಗಳು ಶ್ರೀ ಸಿದ್ಧರಾಮೇಶ್ವರ ದೇವಸ್ಥಾನ, ಬೆಳಗುಂಬ. | 1001.00 |
| 3486. | ಶ್ರೀಮತಿ ಹೇಮಂತಮ್ಮ ಬೇಡರಶಿವನಕೆರೆ, ಚಿತ್ರದುರ್ಗ ತಾ., | 6000.00 |
| 3487. | ಶ್ರೀ ಆರ್.ಎನ್. ರವಿಕುಮಾರ್ ಬಿನ್. ಡಾ। ನಂಜುಂಡಯ್ಯ ವಿಜಯನಗರ, ಬೆಂಗಳೂರು. | 5001.00 |
| 3488. | ಶ್ರೀಮತಿ ಬಾವಿಮನೆ ಸಿದ್ಧಗಂಗಮ್ಮ ಮತ್ತು ಮಕ್ಕಳು ಕೋಡಿಹಳ್ಳಿ, ಗೂಳೂರು ಹೊ. ತುಮಕೂರು. | 5000.00 |
| 3489. | ಶ್ರೀ ಜೆಂಬಣ್ಣ ಕುಪ್ಪಸಗೌಡ ಮಾಗಡಿ ರಸ್ತೆ, ಬೆಂಗಳೂರು. | 1502.00 |
| 3490. | ಶ್ರೀ ಹಾಲೇಶ್ ಹಾಲಪ್ಪನವರು ಬಿ.ಟಿ.ಎಂ. ಲೇಔಟ್, ಬೆಂಗಳೂರು. | 1000.00 |
| 3491. | ಶ್ರೀ ಟಿ.ಎಂ. ಬಸವರಾಜು ಮತ್ತು ಎಂ.ಸಿ. ಚಂದ್ರಯ್ಯ ಬಸವೇಶ್ವರನಗರ, ಬೆಂಗಳೂರು. | 5000.00 |
| 3492. | ಶ್ರೀ ಹೆಚ್.ಸಿ. ಚೇತನ ಬಿನ್ ಹೆಚ್.ಆರ್. ಚೆನ್ನವೀರಯ್ಯ ಗಂಗಾನಗರ, ಬೆಂಗಳೂರು. | 2500.00 |
| 3493. | ಡಾ॥ ಹೆಚ್.ಸಿ.ಲಲಿತಾ ಬಿನ್ ಹೆಚ್.ಆರ್. ಚೆನ್ನವೀರಯ್ಯ ಗಂಗಾನಗರ, ಬೆಂಗಳೂರು. | 2500.00 |
| 3494. | ಶ್ರೀ ಬಿ.ಪಿ. ಮಲ್ಲಿಕಾರ್ಜುನಯ್ಯ ಮತ್ತು ಸಹೋದರರು ರಂಗಸಮುದ್ರ, ಪಾವಗಡ ತಾ॥ ತುಮಕೂರು ಜಿ. | 1500.00 |
| 3495. | ಶ್ರೀಮತಿ ಜ್ಯೋತಿ ಬಿ. ಪಂತ್, ಉಪನ್ಯಾಸಕರು. ಶ್ರೀ ಸಿ.ಶಿ.ಮ. ವಿದ್ಯಾಲಯ, ಬಿ.ಹೆಚ್. ರಸ್ತೆ, ತುಮಕೂರು. | 3806.00 |
| 3496. | ಶ್ರೀ ಸತೀಶ್‌ಜೋಷಿ, ಮಿತ್ರಾನಗರ, ಆಕಾಶವಾಣಿ ಹಿಂಭಾಗ, ಹೈದರಾಬಾದ್. | 2000.00 |
| 3497. | ಶ್ರೀ ಕೆ.ಎಂ. ಮಲ್ಲೇಶ್, ಸಿವಿಲ್ ಇಂಜಿಯರಿಂಗ್ ವಿಭಾಗ, ಎಸ್.ಐ.ಟಿ., ತುಮಕೂರು. | 5000.00 |
| 3498. | ಡಾ॥ ಸಿ. ಸದಾಶಿವಯ್ಯ, ಸಿವಿಲ್ ಇಂಜಿಯರಿಂಗ್ ವಿಭಾಗ, ಎಸ್.ಐ.ಟಿ., ತುಮಕೂರು. | 10,000.00 |
| 3499. | ಶ್ರೀ. ಎಸ್. ಮಲ್ಲೇಶಯ್ಯ, ಗ್ರೂಫ್ 'ಡಿ' ನೌಕರರು ಶ್ರೀ.ಸಿ.ಗ್ರಾ.ಪ್ರೌ.ಶಾಲೆ, ನಾರಸಂದ್ರ, ಮಾಗಡಿ ತಾ. | 1000.00 |
| 3500. | ಶ್ರೀ ಬಿ. ನಾಗೇಶ್, ಸ.ಶಿ. ಶ್ರೀ.ಸಿ.ಗ್ರಾ.ಪ್ರೌ.ಶಾಲೆ, ಗುಡೇಮಾರನಹಳ್ಳಿ, ಮಾಗಡಿ ತಾ. | 1000.00 |
| 3501. | ಶ್ರೀ ಶಿವಾನಂದ್, ಎಸ್.ಕೆ. ಸಿರಾಮಿಕ್ಸ್, ಬಿ.ಎಂ. ರಸ್ತೆ, ಹಾಸನ. | 1000.00 |
| 3502. | ಶ್ರೀಮತಿ ಶಶಿಕಲಾ ಲೋಕೇಶ್ ಬಟವಾಡಿ, ತುಮಕೂರು. | 1000.00 |
| 3503. | ಶ್ರೀ ಅಪ್ಪಣ್ಣಪ್ಪ, ಮಂಜುನಾಥ್ ಇಂಡಸ್ಟ್ರೀಸ್, ಪೀಣ್ಯ ಇಂಡಸ್ಟ್ರಿಯಲ್ ಏರಿಯಾ, ಬೆಂಗಳೂರು. | 5000.00 |
| 3504. | ಶ್ರೀಮತಿ ಉರ್ಮಿಳಾ ಎ.ಗಾಂಧಿ ಮತ್ತು ಎ.ಸಿ.ಗಾಂಧಿ ಕಾರವಾರ ರಸ್ತೆ, ಹುಬ್ಬಳ್ಳಿ | 2000.00 |
| 3505. | ಶ್ರೀ ಬಿ.ಎನ್. ತ್ಯಾಗರಾಜು, ದೈ.ಶಿ.ಶಿ. ಶ್ರೀ.ಸಿ.ಗ್ರಾ.ಪ್ರೌ.ಶಾಲೆ, ಶುಕ್ರವಾರಸಂತೆ, ಹಾಸನ ಜಿ. | 2000.00 |
| 3506. | ಶ್ರೀ ಜಿ. ಮಹಲಿಂಗಯ್ಯ, 6ನೇ ಕ್ರಾಸ್, ಅಶೋಕನಗರ, ತುಮಕೂರು. | 5001.00 |
| 3507. | ಶ್ರೀ ಕೆ. ಗಣೇಶ್ ಬಿನ್ ಲೇಟ್ ಶ್ರೀ ಕೃಷ್ಣಪ್ಪ ವೀರ್ಣೋನಗರ ಅಂಚೆ, ಬೆಂಗಳೂರು. | 1002.00 |
| 3508. | ಶ್ರೀ ಎಸ್.ಬಿ. ರಾಜು, ಸ.ಶಿ. ಶ್ರೀ.ಸಿ.ಗ್ರಾ.ಪ್ರೌ.ಶಾ.,ಪುರುಷನಹಳ್ಳಿ, ಡಿ.ಬಿ.ಪುರ. | 2001.00 |
| 3509. | ಶ್ರೀಮತಿ ಪುಷ್ಪಲತ ಸ.ಶಿ. ಶ್ರೀ ವೀ.ಕ.ಹಿ.ಪ್ರಾ.ಶಾಲೆ, ಅಗ್ರಹಾರದಾಸರಹಳ್ಳಿ, ಬೆಂಗಳೂರು. | 2001.00 |
| 3510. | ಶ್ರೀಮತಿ ಹೆಚ್.ಲಲಿತಮ್ಮ, ಸ.ಶಿ. ಶ್ರೀ.ಸಿ.ಸ.ಪ್ರೌ.ಶಾಲೆ, ಶ್ರೀ ಸಿದ್ಧಗಂಗಾ ಮಠ, ತುಮಕೂರು. | 2001.00 |
| 3511. | ಶ್ರೀ ಪಾಲಾಕ್ಷ. ದೈ.ಶಿ. ಶ್ರೀ.ಸಿ.ಸ.ಪ್ರೌ.ಶಾಲೆ, ಶ್ರೀ ಸಿದ್ಧಗಂಗಾ ಮಠ, ತುಮಕೂರು. | 2001.00 |
| 3512. | ಶ್ರೀ ಎಸ್. ಕುಮಾರಸ್ವಾಮಿ, ಕೆ.ಬಿ.ಕ್ರಾಸ್, ತಿಪಟೂರು, ತುಮಕೂರು ಜಿ. | 2500.00 |
| 3513. | ಶ್ರೀ ಕೆ.ಎಚ್. ಪರಮಶಿವಯ್ಯ, ಪ್ರಾಂಶುಪಾಲರು, ಶ್ರೀ ಸಿದ್ಧಗಂಗಾ ಸಂಜೆ ಕಾಲೇಜು, ತುಮಕೂರು. | 5001.00 |
| 3514. | ಶ್ರೀ ಸಿದ್ಧಲಿಂಗಯ್ಯ, ನಿ.ಶಿ. ಕೆಂಬಳಲು, ಹೆಬ್ಬೂರು ಹೊ. ತುಮಕೂರು ತಾ., | 1001.00 |
| 3515. | ಶ್ರೀ ಸಿ.ಎಸ್. ಜಗದೀಶ್ವರಯ್ಯ, ಬಿನ್ ಶ್ರೀ ಶಿವಣ್ಣ ಚಿಕ್ಕಹಳ್ಳಿ, ಹಿರೇಹಳ್ಳೀ ಅಂಚೆ, ತುಮಕೂರು ತಾ., | 5001.00 |
| 3516. | ಶ್ರೀ ಜಿ. ಬಸವರಾಜಯ್ಯ ಹೆಗ್ಗುಂದ, ನೆಲಮಂಗಲ ತಾ, ಬೆಂ.ಗ್ರಾ.ಜಿಲ್ಲೆ. | 2001.00 |

(ಮುಂದುವರಿಯುತ್ತದೆ) *

